ರಾಷ್ಟ್ರಗೌರವ ಕಾವ್ಯಮಾಲೆ—೧.

# ತಿಲಕ ಪುರಾಣ



ಲೋಕಮಾನ್ಯ ತಿಲಕರು

ಗ್ರಂಥಕರ್ತ

ಮುಳಿಯ ಶಂಕರಭಟ್, ಕರ್ಣಾಟಕ ಕಾವ್ಯರತ್ನ.

1920

ಬೆಲೆ

ಆಣೆ.

1/-

ರಾಷ್ಟ್ರಗೌರವ ಕಾವ್ಯಮಾಲೆ—೧.

# ತಿಲಕ ಪುರಾಣ



ಲೋಕಮಾನ್ಯ ತಿಲಕರು

ಗ್ರಂಥಕರ್ತ

ಮುಳಿಯ ಶಂಕರಭಟ್, ಕರ್ಣಾಟಕ ಕಾವ್ಯರತ್ನ.

ಬೆಲೆ ೮ ಅಣೆ.

# भूमिका



"अहो महत्त्वं महतामपूर्वं विपत्तिकालेऽपि परोपकारः।
यथाऽऽस्य मध्ये पतितोऽपि राहोः कलानिधिः पुण्यचयं ददाति ॥"

यों तो कर्णाटकी संसारके सभी अंग अभी अधूरे हैं, लेकीन जीवन चरित्र की किताबों की और भी बहुत कमी है। इस कमी का नतीजा यह हुआकि अधिकतर कर्णाटक पाठक दुनियाँके बडे आदमियोंके बारे में बहुत कम जानते हैं।

दुसरे सूबोंकी भाषाओं की ऐसी हालत नहीं हैं। बङ्गालीमें एक एक आदमी के जीवन चरित्र के पोते बनगये है। तेलंगी में महाजन चरित्र, मराठीमे महापुरुष का जीवन चरित्र और उपदेश की बहुत बडी किताब हैं। ५ से १० तक रुपया इस किताबका दाम हैं इसीसे इसकी बडाईका ख्याल किया जा सकता हैं। मालूम नहीं कि कर्णाटकी संसार में कब ऐसी किताबें बनैंगी।

संसारमें आकर जिस मनुष्यने देश, जाति और अपनें भाईयोंकी सेवा न की उसका जीवन व्यर्थ हैं। जीवन की सफलता एकमात्र मनुष्य समाज की सेवा करने से हैं। जिस मनुष्य में मनुष्य समाज की सेवा का गुण है वही वास्तव में मनुष्यों में देवता और महपुरुष कहा जा सकता हैं। लाखों स्त्रीपुरुष प्रतिदिन संसार में पैदा होकर पानीके बुलबुले के समान थोडे ही समय में अपनी जीवन लीला समाप्त करते हैं। अपने पीछे संसार में वे अपना कोई चिन्ह नहीं छोड जाते। न कोई आदरपूर्वक उनका नाम लेता और न उनके कार्यों का स्मरण करता। इसके विरुद्ध जो लोग अपने जीवन को मनुष्यसेवा में बितातें हैं, संसार उनका चिर ऋणी रहता है, उनके पवित्र कार्य को लोग आदरपूर्वक गाते गाते नही थकते। उनकी कीर्ति संसार में दिन दुनी और रात चौगुनी बडती रहती हैं। मनुष्य समाज उनके नाम को लेकर अपने आपको धन्य समझता हैं। वास्तव में ऐसे महापुरुष जिस देश में पैदा होते हैं वह देश स्वर्ग के सदृश हो जाता हैं।

अवनत भारत के उद्धार के लिए इस सौ वर्षके भीतर जिन महत्माओं ने अपना सारा जीवन होमा है, लोकमान्य बालगंगाधर तिलक का नाम उनमें अन्यतम है। प्रिय पाठक, कर्णाटक कविरत्न श्रीयुत मुळिय शंकर भट्टजी योंने आपको आज उन्ही महापुरुषका जीवन वृत्तान्त कर्णाटक श्लोकरूपमें-'तिलक पुराण'रूपमें-सुनाते हैं। जीवन चरित्र ही भर नही, उनके सारे देशहित के कार्यों का वर्णन भी पुस्तक में हैं। तिलक महाराजका "स्वराज्य अपना जन्मसिद्ध हक्क हैं, वह अपनेलिये चाहिये" यह मन्त्रका उपदेश भी यह पुस्तक में हैं। पुस्तक राष्ट्र गौरव काव्यमाला ग्रन्थावली'की पहली पुस्तक हैं।

राष्ट्र गौरव काव्यमाला ग्रन्थावली का प्रकाशन इस उद्धेश से प्रारम्भ किया गया है कि उसमे संसारकी किसी प्रकारसे सेवा करनेवाले महात्मओं के जीवन चरित्र प्रकाशित होकर बहुत ही सुलभ मूल्यपर सर्वसाधारण कर्णाटकी-पाटकोंके करकमलीकों शोभा बढावें। महपुरुषोंके जीवन चरित्रोंको पढने और मनन करनेसे जनसमाजका जो उपकार होता है, वह सभी पढे लिखे मनुष्य भली भांति जानते हैं । महापुरुषों के जीवन चरित्र ही वास्तव में मनुष्य को सच्चें पथपर ले जा सकते हैं । जो मनुष्य उच्च और उदार बनाना चाहता हो उसे तो महात्माओं के जीवन चारित्रों के पढनेकी बडी ही आवश्यकता हैं।

जिस पुस्तककी मैं भूमिका लिख रहा हूँ वह कर्णाटक देशके छोटे बडे सब आदमियोंके मतलब की होगी। श्रीमान, गरीब सभी को अपने देशके महापुरुष के बारे में कुछ जानना चाहिये। श्रीमान् शंकर कवियों ने इस उद्धेश से इसकी भाषा भी सबके समझने लायक शैलीमें यह काव्य रचन कीया गया हैं । इसलिये हमारी कर्णाटकी लोग उन्हें कृतज्ञ होना चाहिये.

मंगळूर
मार्गशिर, शु. ९. रौद्र सं.

निवेदक,
भारद्वाज दत्तात्रेय कृष्ण शर्मा,
संपादक, तिलक संदेश.



# ಪರಿಚಯ.

ಲೋಕಮಾನ್ಯ ಬಾಳಗಂಗಾಧರ ಟಿಳಕರ ವಿಷಯವಾಗಿಯಾಗಲಿ ಇಲ್ಲವೆ ಮುಂದಿನ ಪದ್ಯಮಯವಾದ ಅವರ ಚರಿತ್ರದ ವಿಷಯವಾಗಿಯಾಗಲಿ ಬರೆದು ವಾಚಕರಿಗೆ ಆ ಕುರಿತು ಪರಿಚಯ ಮಾಡಿಸಿ ಕೊಡಬೇಕಾದ ಅಗತ್ಯ ತೋರುವುದಿಲ್ಲ. ಆದರೂ ನಮ್ಮ ಮಿತ್ರರೂ, ಆಶುಕವಿಗಳೂ ಆದ ಮುಳಿಯ ಶಂಕರಭಟ್ಟರು ರಚಿಸಿದ "ತಿಲಕ ಪುರಾಣ"ವನ್ನು ಕೇಳಿ ಕೆಳಗಿನ ಎರಡು ಪಂಕ್ತಿಗಳನ್ನು ಬರೆಯುವ ಸ್ಫೂರ್ತಿಯು ನನ್ನಲ್ಲಿ ಉಂಟಾಯಿತು.

ಲೋಕಮಾನ್ಯ ತಿಲಕರ ಚರಿತ್ರವು ವಿದ್ಯಮಾನಜನರಿಗೂ, ಭಾವಿಜನರಿಗೂ ಅನೇಕ ದೃಷ್ಟಿಯಿಂದ ಪರಿಶೀಲನೀಯ ಹಾಗು ಅನುಕರಣೀಯವಾಗಿದೆ. ವಿದ್ವತ್ತೆ, ಶೋಧಕಬುದ್ಧಿ, ಲೇಖನಪಟುತ್ವ, ಸಮಯಪರಿಜ್ಞಾನ, ದೇಶಭಕ್ತಿ, ಕರ್ತೃತ್ವ, ಸ್ವಾರ್ಥತ್ಯಾಗ, ಲೋಕಸತ್ತಾವಾದ ಇತ್ಯಾದಿ ಅನೇಕ ಸಂಗತಿಗಳಲ್ಲಿ ಪಾರಂಗತೆಯನ್ನು ಅಲ್ಲ, ಆತ್ಮೀಯಭಾವವನ್ನು ಪಡೆಯಬೇಕೆಂದಿರುವವರು ಲೋಕಮಾನ್ಯರ ಚರಿತ್ರವನ್ನು ನಿತ್ಯದಲ್ಲಿ ಪಠಿಸಬೇಕು. ಅಷ್ಟು ಅವರ ಚರಿತ್ರದ ಮಹತ್ವವಿದೆ. ಅವರ ಗುಣಸಮುಚ್ಚಯದೊಳಗಿನ ಒಂದೊಂದು ಗುಣವು ಅವರ್ಣನೀಯವಾಗಿದ್ದರೂ ಅವರು ಸಾಧಿಸಿರುವ ನಿಷ್ಕಾಮಕರ್ಮಯೋಗದಲ್ಲೆ ಲೋಕಮಾನ್ಯರ ನಿಜವಾದ ಮಹತ್ವವಿದೆ, ಮತ್ತು ಈ ಕಾರಣದಿಂದಲೆ ಲೋಕಮಾನ್ಯರು ಮಹಾತ್ಮರು. ಒಂದು ಕಾಲದಲ್ಲಿ ಅಸಂಭಾವ್ಯ ಕಾರ್ಯಗಳನ್ನು ಮಾಡಿತೋರಿಸಿ ಜನರು ಮಹಾತ್ಮಪದವಿಯನ್ನು ಪಡೆಯುತ್ತಿದ್ದರು. ಗೋವರ್ಧನಪರ್ವತವನ್ನು ಎತ್ತಿ ಶ್ರೀ ಕೃಷ್ಣನೂ, ಕೋಣದ ಬಾಯಿಯಿಂದ ವೇದಗಳನ್ನು ನುಡಿಸಿ ಜ್ಞಾನೇಶ್ವರಮಹಾರಾಜರೂ, ಬರ್‌ರಿಯ ಏಳು ಚೂರಿನಿಂದ ನೂರಾರು ಜನರ ಸಂತರ್ಪಣೆಯನ್ನು ಮಾಡಿ ಕ್ರಿಸ್ತನೂ ಈ ಮೇರೆಗೆ ಪುರಾಣಪುರುಷರು ತಮ್ಮ ತಮ್ಮ ಮಾಹಾತ್ಮ್ಯವನ್ನು ಪ್ರಕಟಿಸಿದ್ದು ನಾವು ಓದುತ್ತೇವೆ. ಇಂಥ ಪರಿಸ್ಥಿತಿಯಲ್ಲಿ ಬಳೆದ ಶ್ರದ್ಧಾಳುಗಳು ಒಂದು ವೇಳೆ ತಿಲಕರ ಚರಿತ್ರೆಯನ್ನು ಅದೆ ವಾಸನೆಯಿಂದ ಓದಲು ತೊಡಗಬಹುದು. ಆದರೆ ಅಂಥವರಿಗೆ ನಾವು ಮುಂಚಿತವಾಗಿಯೆ ಹೇಳುವುದೇನೆಂದರೆ, ಕಾಲವು ಬದಲಾಗುತ್ತ ಬಂದಂತೆ ಮಾಹಾತ್ಮ್ಯಲಕ್ಷಣವೂ ಬದಲಾಗುತ್ತದೆ. ಆದ್ದರಿಂದ ಅಸಂಭಾವ್ಯಚಮತ್ಕಾರದ ಥರ್ಮಾಮಿಟರನ್ನು ಹಚ್ಚಿ ಮಾಹಾತ್ಮ್ಯವನ್ನು ಪರೀಕ್ಷಿಸುವ ಸಮಯವು ಈಗ ಉಳಿಯಲಿಲ್ಲ. ಈಗಿನ ಮಾಹಾತ್ಮ್ಯವು ಲೋಕಸಂಗ್ರಹದಗೋಸ್ಕರ ಅಶಿಕ್ಷಿತರ ಕರ್ತವ್ಯದಿಙ್ಮೂಢತೆಯನ್ನು ಓಡಿಸುವದರ ಬಗ್ಗೆ ಸರ್ವಸ್ವ ತ್ಯಾಗಮಾಡಿ ಅವರ ಅಂತಃಕರಣಗಳನ್ನು ವಿಕಾಸಗೊಳಿಸಿ, ಅವರನ್ನು ಕರ್ತವ್ಯಪರರನ್ನಾಗಿ ಮಾಡುವದರಲ್ಲೆ ಇದೆ. ಮತ್ತು ಇಂಥ ಕಾರ್ಯವನ್ನು ಇತ್ತಲಾಗೆ ಎಂದರೆ ೧೦೦—೧೫೦ ವರ್ಷದ ಈ ಅವಧಿಯಲ್ಲಿ ನಮ್ಮಾ ದೇಶದಲ್ಲಿ ಈ ಮಹಾ

ತ್ಮರೆ ಮೊದಲಾಗಿ ಪ್ರಾರಂಭಿಸಿದರು. ಈ ಕಾರ್ಯವು ಗೋವರ್ಧನಪರ್ವತೋದ್ಧಾರಕ್ಕಿಂತಲೂ, ರೊಟ್ಟಿಯ ಸಂತರ್ಪಣೆಗಿಂತಲೂ ಎಷ್ಟೋ ಶ್ಲಾಘ್ಯವೂ, ಚಿರಸ್ಥಾಯಿಯೂ ಆಗಿದೆ ಎಂಬುದು ವಿಚಾರವಂತರಿಗೆ ತಿಳಿಯದೆ ಇರದು. ಇದೆ ಅವರ ಚರಿತ್ರದೊಳಗಿನ ಮಾಹಾತ್ಮ್ಯವು.

ಮುಂದಿನ ಸುಕಾವ್ಯವನ್ನು ವಾಚಕರು ಈ ದೃಷ್ಟಿಯಿಂದಲೆ ಪಠಿಸಬೇಕೆಂದು ನನ್ನ ಕೋರಿಕೆಯು. ಕವಿಗಳು ತಮ್ಮ ರಸಾಳವಾದ ಮತ್ತು ಸುಬೋಧವಾದ ವಾಣಿಯಿಂದ ಲೋಕಮಾನ್ಯರ ಚರಿತ್ರವನ್ನು ಕನ್ನಡಿಗರಿಗೆ ಒಪ್ಪಿಸಿದ್ದಾರೆ. ನಾನು ಸ್ವತಃ ಕನ್ನಡಕಾವ್ಯದ ಅಭಿಜ್ಞನಲ್ಲವಾದರೂ ಮುಂದಿನ ಪ್ರಾಸಾದಿಕ ಕಾವ್ಯವನ್ನು ಕೇಳುವಾಗ ನನ್ನ ಕಿವಿಗಳೊಡನೆ ನನ್ನ ಅಂತಃಕರಣವು ಏಕತಾನತೆಯನ್ನು ಹೊಂದುತ್ತದೆ ಎಂಬೀ ಸಂಗತಿಯನ್ನು ಅಡಗಿಸಲು ನನ್ನಿಂದಾಗಲಿಕ್ಕಿಲ್ಲ. ಆಶುಕವಿಗಳಾದ ಶಂಕರಭಟ್ಟರ ಈ ಪರಿಶ್ರಮವು ಸಫಲವಾಗಿ ಅವರು ಇನ್ನೂ ಅನೇಕ ರಾಷ್ಟ್ರೀಯ ವಿಚಾರಗಳಿಗೆ ಕವಿತೆಯ ಉಡುಪನ್ನು ಉಡಿಸಲಿ ಎಂದು ನಾನು ಆಶಿಸುವೆನು.

ಕೇ. ಇ. ಎಮ್. ಹಾಯಸ್ಕೂಲ್<br>ವಿ. ಮಾರ್ಗಶಿರ ಶು। ೫ ಶ. ೧೮೪೨. }

ಆತ್ಮಾರಾಮಶಾಸ್ತ್ರೀ,<br>ಓಡ್ಲಮನೆ.



# ಮುನ್ನುಡಿ.

ಸಾಮಾನ್ಯ ಜನರಿಗೆ— ಅದರಲ್ಲಿಯೂ ಹಳ್ಳಿಗಾಡಿನ ಜನರಿಗೆ— ಮತ್ತು ಹೆಂಗುಸರಿಗೆ ಗದ್ಯಗ್ರಂಥಗಳಲ್ಲಿರುವುದಕ್ಕಿಂತಲೂ ಪದ್ಯಗ್ರಂಥಗಳಲ್ಲಿಯೆ ಪ್ರೀತಿಯು ಹೆಚ್ಚು. ಆದುದರಿಂದ ಲೋಕಮಾನ್ಯರ ಚರಿತ್ರೆಯನ್ನು "ವಾರ್ಧಿಕ್ಯ ಷಟ್ಪದಿ" ಪದ್ಯರೂಪದಲ್ಲಿ ರಚಿಸಿ ಅದಕ್ಕೆ ಈ ಗ್ರಂಥರೂಪವನ್ನು ಕೊಟ್ಟಿರುವೆನು. ಈ ಗ್ರಂಥದ ಉದ್ದೇಶವೆಲ್ಲ ಪೀಠಿಕಾ ಸಂಧಿಯಲ್ಲಿ ಹೇಳಲ್ಪಟ್ಟಿರುವುದು. ವಾಚಕರು ತಮ್ಮ ಸ್ನೇಹಿತರನ್ನೂ ಪ್ರೇರಿಸಿ ನನ್ನೀ ಪ್ರಯತ್ನಕ್ಕೆ ಪ್ರೋತ್ಸಾಹವನ್ನಿತ್ತರೆ, "ರಾಷ್ಟ್ರಗೌರವ ಕಾವ್ಯಮಾಲೆ" ಎಂಬೀ ಗ್ರಂಥಮಾಲೆಯಲ್ಲಿ ಹಿಂದೂದೇಶದ ಅನೇಕಾನೇಕ ಮಹಾಪುರುಷರ ಸಚಿತ್ರ ಜೀವನಚರಿತ್ರೆಗಳನ್ನೂ ಅವರ ಬೋಧಾಮೃತವನ್ನೂ ಪದ್ಯರೂಪವಾಗಿ ಹೊರಗೆಡವಿ ಕನ್ನಡ ಭಾಷಾಭಿಮಾನಿಗಳಿಗೆ ಅರ್ಪಿಸಬೇಕೆಂದಿರುವೆವು. ಇದಕ್ಕಾಗಿ ಚಂದಾದಾರರಾಗತಕ್ಕವರು ೮ ಆಣೆಯನ್ನು ಕಳುಹಿಸಿ ಅವರ ಹೆಸರನ್ನು ದಾಖಲು ಮಾಡಿಸಿದರೆ, ಗ್ರಂಥಗಳು ಹೊರಬಿದ್ದಂತೆಲ್ಲ ಅವನ್ನು ಮುಕ್ಕಾಲು ಬೆಲೆ, ಮತ್ತು ಅಂಚೆವೆಚ್ಚಕ್ಕೆ ಸರಿಯಾಗಿ ವಿ. ಪಿ. ಮಾಡಿ ಕಳುಹಿಸುವೆವು. ಈ ವಿಚಾರದಲ್ಲಿ ಉದಾರಹೃದಯರಾದ ಕನ್ನಡಿಗರಿಂದ ಪೂರ್ಣ ಪ್ರೋತ್ಸಾಹವು ದೊರೆಯುವುದೆಂದು ನಂಬಿರುವೆವು.

ಈ ಕಾರ್ಯದಲ್ಲಿ ಪ್ರೋತ್ಸಾಹವನ್ನಿತ್ತು ಈ ಪುಸ್ತಕದ "ಪರಿಚಯ"ವನ್ನು ಬರೆದು ಕೊಟ್ಟ ಬ್ರ। ಶ್ರೀ। ಓಡ್ಲಮನೆ ಆತ್ಮಾರಾಮಶಾಸ್ತ್ರಿಗಳಿಗೂ; ಇದರಲ್ಲಿ ಪ್ರಕಟಿಸಿರುವ ಬ್ಲಾಕುಗಳನ್ನು ಕೊಟ್ಟು, ನಮ್ಮ ಕೋರಿಕೆಯ ಮೇರೆಗೆ ನಮ್ಮ ರಾಷ್ಟ್ರೀಯ ಭಾಷೆಯಾದ ಹಿಂದೀಯಲ್ಲಿ "ಭೂಮಿಕೆ"ಯನ್ನು ಬರೆದುಕೊಟ್ಟ ಮ। ರಾ। ರಾ। ಡಿ. ಕೆ. ಭಾರದ್ವಾಜ ವಿದ್ಯಾಭೂಷಣ, ಎಮ್. ಆರ್. ಎ. ಎಸ್. (ಲಂಡನ್), ಸಂಪಾದಕ, ತಿಲಕಸಂದೇಶ, ಇವರಿಗೂ; ಈ ಗ್ರಂಥವನ್ನು ರಚಿಸುವುದಕ್ಕೆ ಪ್ರೋತ್ಸಾಹಿಸಿ ಪ್ರಕಾಶದ ಎಲ್ಲ ಭಾರವನ್ನೂ ವಹಿಸಿಕೊಂಡ ಮ। ರಾ। ಭಿಡೆ ಶೇಷಭಟ್ಟ ಬಿ. ಎ., ಬಿ. ಎಲ್., ಹೈಕೋರ್ಟು ವಕೀಲ, ಇವರಿಗೂ; ಪುಸ್ತಕವನ್ನು ಎಲ್ಲರ ಅಚ್ಚುಮೆಚ್ಚುಗೆಗೆ ಪಾತ್ರವಾಗುವಂತೆ ಮುದ್ರಿಸಿಕೊಟ್ಟ ಧರ್ಮಪ್ರಕಾಶ ಛಾಪಖಾನೆಯವರಿಗೂ ನಮ್ಮ ವಂದನೆಗಳನ್ನು ಸಮರ್ಪಿಸುವೆವು.—

ಇತಿ,—

"ರಾಷ್ಟ್ರಗೌರವ ಕಾವ್ಯಮಾಲಾ ಕಾರ್ಯಾಲಯ"
ಪೊ. ಕೊಡಿಯಾಲಬೈಲು, ದ. ಕನ್ನಡ.

**ಗ್ರಂಥಕರ್ತ,**
ಮುಳಿಯ ಶಂಕರಭಟ್.



ಶ್ರೀಃ

# ತಿಲಕಪುರಾಣ.

## ಪೀಠಿಕಾಸಂಧಿ.

ಶ್ರೀಪತಿಯೆ ದೇವರೆಂದೆನ್ನುತ್ತ ಕೆಲವರು, ಉ
ಮಾಪತಿಯೆ ದೈವವೆನ್ನುತ ಹಲರು, ಅರ್ಹಂತ
ನೇ ಪರಂಜ್ಯೋತಿಯೆಂದೆನುತ ಮಿಕ್ಕವರು, ಅಲ್ಲಾ ಎಂದು ಬೇರೆಯವರು.
ಕಾಪಟ್ಯವೇತಕೆ? ಎಹೋವನೆಂದುಳಿದವರು,
ಈಪರಿಯಲೊಂದೊಂದು ವಿಧವಾಗಿ ನುತಿಸುತಿರೆ,
ಆ ಪರಮತತ್ವವನ್ನಿದಿರುನೋಡುತ ಮನದಿನಗದಿಹನೆ ಸುಜ್ಞಾನಿಯು? ॥ ೧ ॥

ಏನಾದರೊಂದು ಕೃತಿಯನು ಬರೆವ ಮೊದಲದಕೆ
ನ್ಯೂನತೆಯು ಬರಬಾರದೆಂದು ಮಂಗಲವಚನ
ದಾನಿಯಮವನ್ನು ಹೇಳುವರು ವಿದ್ವಾಂಸರೆಂದೆನಿಸಿಕೊಂಡಿರುವ ಜನರು. ॥
ನಾನದನು ಲೆಕ್ಕಿಸುವುದಿಲ್ಲವೇಕೆನ್ನುವಿರೆ?
ಮಾನವರ ಚರಿತೆಗದು ಬೇಕು, ಹೀಗಿರುತಿಹ ಮ
ಹಾನುಭಾವರ ಚರಿತೆಗೇಕೆ ಮಂಗಲ? ಇದುವೆ ಮಂಗಲವು ಲೋಕಕೆಲ್ಲ. ॥ ೨ ॥

ಕನ್ನಡದಲಿಲ್ಲ ಹೀಗಿರುವ ಕೃತಿ, ಎಂದಿದನು
ಪೂರ್ಣಮನದಿಂದ ಬರೆಯುವೆನು, ಇದರಲಿ ದೋಷ
ವನ್ನು ಹುಡುಕದೆ, ಹೊಟ್ಟೆಕಿಚ್ಚು ತೋರಿಸದೆ, ದಯಮಾಡಿ, ಬೇಕೆಂದು ನೆನಸಿ, ॥
ಇನ್ನಿದನ್ನೋದಿದರೆ, ಅದರಿಂದಲೇ ನಾನು
ಧನ್ಯನಾಗುವೆನು, ಮುಂದಿನ ಕವಿಗಳೀದಾರಿ
ಯನ್ನೆ ಹಿಡಿದರೆ ಶೀಘ್ರವಾಗಿ ಕನ್ನಡವು ಕತ್ತುರಿಯಹುದು ಲೋಕದಲ್ಲಿ. ॥ ೩ ॥

ಕೇಡು ಹುಡುಕುವರೆಂದು ಚಿಂತೆ ಮನಕಿಲ್ಲ, ಕೊಂ
ಡಾಡಿದರೆ ಅದರಿಂದ ಸಂತೋಷವಿಲ್ಲ, ಇದ
ನೋಡದೆಯೆ ಹಾಗೆಹೀಗೆಂದು ಹೇಳಿದರದುವೆಚಿಂತಾಸ್ಪದವು ತಿಳಿಯಲು. ॥
ಆಡುವವರಾಡಿಕೊಳ್ಳುವರದಕೆ ನಾವೇನು
ಮಾಡಲಾಗುವುದು! "ಭಿನ್ನರುಚಿರ್ಹಿಲೋಕ" ಎಂ
ದಾಡಿದನು ಕಾಲಿದಾಸನು. ಹೇಳದಿರಬಹುದು, ಕೇಳೆನೆಂದಿಹುದು ಹೇಗೆ? ॥ ೪ ॥

ವ್ಯಾಕರಣನಿಯಮಗಳ ಸಡಿಲಿಸುತ ಸಂಧಿಗಳ
ಬೇಕಾದ ತೆರದಲಿ ವಿರೂಪವಾಗದ ವೊಲು ಅ
ನೇಕ ಕಡೆಗಳಲಿ ಮಾತಾಡಿದಂತಿದ್ದೆಲ್ಲರೂ ಓದುವಂತೆ ಬರೆದು ॥
ಹಾಕುವೆನಿದನು ಕನ್ನಡಿಗರ ಮುಂದಕೆ, ಹಳೆಯ
ವ್ಯಾಕರಣಭಕ್ತರೇನಾದರೂ ಕೂಗುತ ನಿ
ರಾಕರಿಸೆ ಹೊಸಗನ್ನಡಕೆ ಕೊರತೆಯುಂಟೆ ಪರಿವೃತ್ತಿಮಯವಹಲೋಕದಿ? ॥ ೫ ॥

ಕನ್ನಡದ ಕತ್ತುರಿಯು ತಿಳಿಯದಿಹಕಾಲದಲಿ
ಇನ್ನಿನ್ನು ಕರಡಿಗೆಯಲಿಟ್ಟು ಮುಚ್ಚುವುದೇಕೆ?
ಮಾನ್ಯರಾ ದಕ್ಷಿಣೋತ್ತರಮಾರ್ಗದಲಿ ದಾರಿಬಿಟ್ಟು ತೊಳಲುವುದೇತಕೆ? ॥
ಮುನ್ನ ಹರಿಹರಕವಿಯೆರಳಕುಳಕ್ಷ ಳಗಳಡಿ
ಯನ್ನೆಕಿತ್ತಿಹನದರಗೊಡವೆ ನಮಗೇಕೆ? ಆ
ಸನ್ನವಾದಿಪ್ಪತ್ತನೆಯ ಶತಕವಿದು ಸುಧಾರಣೆಯ ಬಂಡಿಯು ಹರಿವುದು. ॥ ೬ ॥

ಕೆಲಗಾಲ ದೂರುವರು; ಮತ್ತೆ ಈ ರೀತಿಯೇ
ಬಳಕೆಯಲಿ ಬರಲು ಇದನೇ ಶುದ್ಧವೆನ್ನುವರು;
**ತಿಲಕ**ನನೆ ಮೊದಲು ದೂರುತ್ತಿದ್ದವರೆ ಈಗ ದೇವಾಂಶನೆಂದೆಂಬರು. ॥
ಮಳಿಗೆಯಲ್ಲಿರುವ ಬಟ್ಟೆಗಳೆಲ್ಲವನುಹರದ
ನೊಳಗಿಟ್ಟುಕೊಂಡಿರಲು ವ್ಯಾಪಾರವಾಗುವುದೆ?
ತಿಳಿದರಲ್ಲವೆ ಗ್ರಾಹಕರು ಬರುವರಲ್ಲದಿರೆ ಸುಳಿಯರಾಎಡೆಗೊಬ್ಬರು. ॥ ೭ ॥

"ತಿಳಿಗನ್ನಡವು" ಎಂದರಾವುದೀ ಸಮಯದಲಿ?
ತಿಳಿವಂತೆ ಬರೆದಕನ್ನಡವು; ಎಂದೆನ್ನುತ್ತ
ಕೊಳೆಗನ್ನಡವ ಮಿಶ್ರಮಾಡಿ ಬರೆವುದರಿಂದ ಅಳಿದು ಹೋಗದೆ ಭಾಷೆಯು? ॥
ಹಳೆಗನ್ನಡದಿ ಬರೆವೆನೆಂಬೆನೋ? ಜನರಿಗದು
ಹುಳಿಗನ್ನಡವೆ ಆಗಿಹೋಗಿರುವುದದರಿಂದ
ಎಳೆಗನ್ನಡದಿ ಬರೆಯಬೇಕೆಂಬ ಯೋಜನೆಯು ವೊಳೆದೋರಿರುವುದು ಮನದಿ. ॥ ೮ ॥

ಸುಲಭವಾಗಿರುವ ಭಾಷೆಯಲೊಬ್ಬ ಬರೆದನೆನೆ,
ತಿಳಿಯದವನೆನ್ನುವರು; ಬಿಗುವಾಗಿ ಬರೆದೊಡನೆ,
ತಲೆಬಡಿದುಕೊಳ್ಳುವರಿದಾರಿಗೋದಲಿಕೆಂದು; ಕಾವ್ಯಲಕ್ಷಣವ ತಿಳಿಸೆ; ॥
ತಿಳಿಯದವ ನಾನೆಂದು ತಿಳಿದನಿವನೆಂದೆನುತ,
ಮುಳಿದೇಳುವರು; ಆದಕಾರಣದಿ ಲೋಕದಲಿ,
ತಿಳಿದ ಸುಜ್ಞಾನಿಯಾಗಿರುವವನೆ ಸರ್ವದಾಮುಳಿಯದವನಾಗಿರುವನು. ॥ ೯ ॥

ಮಲಗಿರುವ ಸಮಯದಲಿ **ಲೋಕಮಾನ್ಯರು** ನನಗೆ
ತಿಳುಹಿದರು ಸ್ವಪ್ನದಲಿ ಬಂದ ಕಾರ್ಯಗಳನ್ನು
ಕಳೆದ ಜನ್ಮವಸಹಿತ, ಅದರಂತೆ ಮುಂದೆ ಕೈಕೊಳುವೆನೀಕಾವ್ಯವನ್ನು. ॥
**ತಿಲಕ**ಚರಿತೆಯ ಬರೆದರದು ಲೋಕದಲಿಮುಂದೆ
ಫಲಕಾರಿಯಾಗದಿರದೆಂಬ ನಂಬಿಕೆಯಿಂದ
ತಿಳಿದಂತೆ ರಚಿಸುತ್ತಲಿದನು ಭಾರತಮಾತೆ ಪದತಳಕ್ಕರ್ಪಿಸುವೆನು. ॥ ೧೦ ॥

ಹಾಳುಹರಟೆಗಳೆಂಬುದೊಂದಾದರಿಲ್ಲ, ಇದು
ಕೇಳತಕ್ಕುದು **ತಿಲಕ**ಪೌರಾಣವೆಲ್ಲರಿಗು;
ಕೇಳಿತಪ್ಪಿರಲು ತೋರಿಸಿಕೊಟ್ಟುತಿದ್ದಿದರೆ ಬಹಳ ಉಪಕಾರವಹುದು. ॥
ಬಾಲಬುದ್ಧಿಯಲಾವನೋ ಬರೆದನಿದನೆಂದು
ಆಲಸ್ಯಮಾಡದಿರಿ, ಯಾವುದನ್ನಾದರೂ
ಮೇಲುಕೀಳೆಂದು ಮಾಡುವ ಭಾರವದು ವಿಮರ್ಶೆಯನು ಹೊಂದಿಹುದಲ್ಲವೆ? ॥ ೧೧ ॥

ಪೀಠಿಕಾ ಸಂಧಿ ಸಂಪೂರ್ಣ.

---

## ಎರಡನೆ ಸಂಧಿ.

॥ **ಸೂಚನೆ** ॥

ಶ್ರೀ ಸೂರ್ಯನಾರಾಯಣವ್ರತಮಹಿಮೆಯಿಂದ
ಭೂಸುರಶ್ರೇಷ್ಠ ಗಂಗಾಧರನ ಕುಲಗಗನ
ಭಾಸುರಾರ್ಯನು ಮೂಡಿಬೆಳಗಿದನು ಪಾರ್ವತೀಜಠರ ಪೂರ್ವಾದ್ರಿಯಿಂದ॥

ನೀರಿನೊಳಗಡೆಸುತ್ತಿ ಹೋಗುವುದರಿಂದ ನೆಲ
ಕೇರಿನೆಟ್ಟಗೆ ಹೋಗುವುದೆ ಸುಲಭವೆಂದೆಣಿಸಿ,
ಭೂರಿಭೀಕರಶರೀರದ ತಿಮಿಂಗಿಲವು ಪಶ್ಚಿಮಶರಧಿಯಿಂದಲೆದ್ದು; ॥
ಧಾರಿಣಿಯ ನಡುವೆ ಹೋಗುತ್ತಿರಲು, ದಣಿದು ಬಾ
ಯಾರಿ ಕಂಗೆಟ್ಟು ನಿಂದುದೊ! ಹೇಳೆನಲು ಮಹಾ
ಮೇರುಗಿರಿ ತೋರುವುದು ಭರತಭೂಮಿಯ ಬಡಗುದಿಕ್ಕಿನಲಿ ಶೋಭೆಯಿಂದ. ॥ ೧ ॥

ಪೂರ್ವ ಪಶ್ಚಿಮ ಸಮುದ್ರಗಳ ಭಾರವನೀಗ
ಸರ್ವವಿಧದಿಂದಲೂ ತೂಗಲೇ ಬೇಕೆಂದು
ಗರ್ವಿಸುತ ಕಮಲಜನು ಕೈಯಲ್ಲಿ ಹಿಡಿದ ತ್ರಾಸಿನಕೋಲೊ? ಅಲ್ಲದಿರಲು, ॥

ಉರ್ವಿಯೆಂಬೀ ಹೊಲಕೆ ನೀರೆರೆವಕಾರ್ಯವನು
ನಿರ್ವಹಿಸಬೇಕೆಂದು ಮನದಲ್ಲಿ ನೆನಸುತ್ತ
ಪೂರ್ವಸಾಗರಕೆ ಹಾಕಿದ ಏತವಿದು ತೋರುತಿರುವುದೆನೆ ಮೆರೆಯುತಿಹುದು. ॥ ೨ ॥

ಆಕಾಶವೆಂಬ ಮಾಳಿಗೆಯನ್ನು ಹತ್ತಲಿಕೆ
ನಾಕಿಗಳು ಮಾಡಿರುವ ಮೆಟ್ಟಲೋ? ಅಲ್ಲದಿರೆ
ಲೋಕೇಶನೆಂಬ ಸೊನ್ನಾರನಾ ತಾರಕಿಗಳೆಂಬ ನಾಣ್ಯಗಳಮಾಡೆ; ॥
ಜೋಕೆಯಲಿಮಾಡಿಸಿದ ಮುದ್ರಣಾಲಯವೊ? ಆ
ಪಾಕಾರಿ ರಕ್ಕಸರ ಬಾಧೆಗೋಸುಗಗೈದ
ಪ್ರಾಕಾರವೋ? ಎಂದನೇಕವಿಧವಾಗಿ ಕಾಂಬಾಕನಕಗಿರಿ ಮೆರೆವುದು. ॥ ೩ ॥

ಹೀಗೆ ಶೋಭಿಸುತಿರುವ ಮೇರುವಿನ ದಕ್ಷಿಣದ
ಭಾಗದಲ್ಲಿಹುದು ಕರ್ಣಾಟಕವದಕೆ ಕಲಶ
ವಾಗಿರುವ ಮಂಗಳೂರಿನಲಿ ಅಭಿನವಸೂತಮುನಿ ಇರುವನವನ ಬಳಿಗೆ ॥
ಆಗ ಅಲ್ಲಿರುವ ನೂತನಶೌನಕಾದಿಗಳು
ಹೋಗಿ, ಕೈಮುಗಿದು ಕೇಳಿದರು, ಪೌರಾಣಿಕರೆ!
ಈಗ ನಮ್ಮೆಲ್ಲರ ಮನಸ್ಸಿನಲಿ ಅತಿ ಕುತೂಹಲವಿರುವುದೊಂದರಲ್ಲಿ. ॥ ೪ ॥

"ಸುರನರೋರಗರಲ್ಲಿ ಯಾರಿಗೂ ದೊರೆಯದಾ
ಹಿರಿದಾದ **ಲೋಕಮಾನ್ಯತೆ**ಯನ್ನು ನಮ್ಮ ಈ
ಭರತಖಂಡದಲೊಬ್ಬ ಪಡೆದಿರುವನೆಂದು ಕೇಳಿರುವೆವದರಂದವನ್ನು, ॥
ಗುರುಗಳೇ! ನಾವು ನಿಮ್ಮಯ ಶಿಷ್ಯರೆಂಬೊಂದು
ಕರುಣೆಯು ಮನಸ್ಸಿನಲಿ ಇರುವುದಾದರೆ ನಮಗೆ
ಅರುಹಬೇಕೆಲ್ಲವನು ವಿಸ್ತಾರವಾಗಿ" ಎಂದೆರಗೆ ಹೀಗೆಂದನವನು. ॥ ೫ ॥

ಹಿಂದಕುತ್ತರಸೀಮೆಯಿಂದ ಆರ್ಯರು ಇಲ್ಲಿ
ಬಂದು ಆವರಿಸಿಕೊಂಡುದರಿಂದ ಈ ದೇಶ
ಹೊಂದಿತಾರ್ಯಾವರ್ತವೆಂಬ ಹೆಸರನ್ನು, ಅದರಲ್ಲಿಯೂ ಶ್ರೇಷ್ಠವಾಗಿ, ॥
ಸಂದ ಕರ್ಣಾಟಕದ ಕೇಂದ್ರವಾಗಿರುತಿದ್ದು
ನಿಂದುದಾ ವಿಜಯನಗರವು, ಅಲ್ಲಿ ಹರಿಹರನ
ತಂದು ನಿಲ್ಲಿಸಿ ಪಟ್ಟಗಟ್ಟಿದಾ **ಮಾಧವಾಚಾರ್ಯ**ನನುಬಲ್ಲಿರೇನು? ॥ ೬ ॥

ಆತ **ವಿದ್ಯಾರಣ್ಯ**ನೆಂಬ ಬಿರುದಿಂದ ಪ್ರ
ಖ್ಯಾತನಾಗಿಹನವನು ಧರ್ಮರಕ್ಷಣಕೆ ನಿ
ರ್ಭೀತಿಯಿಂದಾ ಮುಸಲ್ಮಾನರಲಿ ಹೊಡೆದಾಡಿ ಹಿಂದುಗಳನುದ್ಧರಿಸುತ; ॥

ನೀತಿ ನಿಯಮಗಳಿಂದ ರಾಜ್ಯವನ್ನಾಳಿಸುತ,
ಭೂತಳಕೆ ಇದುವೆ ಆದರ್ಶವೆಂದೆನಿಸುತ್ತ,
ಮಾತೃದೇಶದ ಸೇವೆಯಲ್ಲಿ ನಿಜದೇಹವನು ಸವೆಯಿಸುತ್ತಿರುತಿದ್ದನು. ॥ ೭ ॥

ಅಂದು ಮೊದಲಾಗಿ ವಿದ್ಯಾರಣ್ಯಮುನಿವರನು
ಮುಂದಾಳುಗಳ ಅಗ್ರಗಣ್ಯನಾದನು, ಆದ್ದ
ರಿಂದಲೇ **ಕರ್ಣಾಟಸಿಂಹಾಸನಸ್ಥಾಪನಾಚಾರ್ಯ**ನೆಂಬ ಬಿರುದ ॥
ಹೊಂದಿದನು, ಸರ್ವರಿಗು ಸುಖಸಂಪದಗಳನ್ನು
ತಂದುಕೊಟ್ಟನು, ಬಳಿಕ ಎಲ್ಲರೂ ಸುಖದಾಸೆ
ಯಿಂದ ಮೈಗಳ್ಳರಾದರು, ಇದನುನೋಡಿ **ವಿದ್ಯಾರಣ್ಯ**ಮುನಿರಾಯನು; ॥ ೮ ॥

ಎಲ್ಲರೂ ಸುಖಿಗಳಾಗಿರುವರಿದರಿಂದ ಇವ
ರಲ್ಲಿ ಸೋಮಾರಿತನ ಮನೆಮಾಡಿರುವುದಿದನು
ತಳ್ಳುವುದಕೇನುಪಾಯವ ಮಾಡಬೇಕೆಂದು ಆಲೋಚಿಸುತ್ತಲಿದ್ದು; ॥
ಒಳ್ಳೆಯದು, ತಿಳಿದೆನೀದೇಶ ಬೇಗನೆ ಪರರ
ಕೊಳ್ಳೆಗೀಡಾಗುವುದು, ನಮ್ಮವರ ಕೈವಶದಿ
ಉಳ್ಳ ಸರ್ವಸ್ವವೂ ಪರರಪಾಲಾಗುವುದು; ಇದು ದೈವಸಂಕಲ್ಪವು. ॥ ೯ ॥

ಆದುದಾಗಲಿ ಮತ್ತೆ ಬೇರೆಜನ್ಮವಹೊಂದಿ
ಸಾಧಿಸುವೆ ರಾಜಕೀಯೋನ್ನತಿಯನಾತೆರದಿ
ಬೋಧಿಸುವೆ ಭಾರತೀಯರನೆಂದು ನಿಶ್ಚೈಸಿ,ಬಂದ ಕಾರ್ಯವನು ಮಾಡಿ, ॥
ಹೋದನಲ್ಲಿಂದ ಮತ್ತಾರು ಕಂಡವರುಂಟು?
ಮೇದಿನಿಯನಾಳಿದರು ಕರ್ಣಾಟದರಸುಗಳು,
ಹೋದುದೀಪರಿ ಕೆಲವುಕಾಲ, ಕನ್ನಡಿಯಾಯ್ತು ಕನ್ನಡವೆ ಲೋಕದಲ್ಲಿ. ॥ ೧೦ ॥

ಆ ರಾಜಕುಲದಲ್ಲಿ ಹುಟ್ಟಿ ಪಟ್ಟವನೇರಿ
ರಾರಾಜಿಸಿದ ಕೃಷ್ಣರಾಜನವನಾತ್ಮಜೆಯು
ನಾರಾಜವದನೆಯನು ತನ್ನ ಸೋದರದಳಿಯನಾಗಿ ವಿಖ್ಯಾತನಾದ; ॥
ಶ್ರೀರಾಮರಾಜನಿಗೆ ಪಟ್ಟದರಸಿಯ ಮಾಡಿ,
ಪಾರುಪತ್ಯವನೆಲ್ಲ ಅವನಕೈಯಲಿ ನೀಡಿ,
ಆರಾಮವಾಗಿ ಕೆಲಕಾಲವಿದ್ದಾ ಮೇಲೆ ಸುರಲೋಕವನು ಹೊಕ್ಕನು. ॥ ೧೧ ॥

ಆಗಲಾ ರಾಮರಾಜೇಂದ್ರನತಿ ಉನ್ಮತ್ತ
ನಾಗಿ ತನಗಾರುಸರಿಯಿಲ್ಲೆಂಬ ಕೊಬ್ಬಿಂದ
ಬೀಗಿ, ವಿಷಯಾತುರನು ಕಾತರತೆಯಿಂದ ನಿಜಧರ್ಮಕರ್ಮವನೆ ಮರೆತು, ॥

ಹೋಗಿಮ್ಲೇಚ್ಛಸ್ತ್ರೀಯಳನ್ನು ಹಿಡಿತಂದು ಅನು
ರಾಗದಿಂದಿರಲವಳ ಕಾರಣದಿ ಸಂಗ್ರಾಮ
ವಾಗಿ ತಾಳೀಕೋಟೆಯಲ್ಲಿ ಬೇರಿಗೆ ಬಿಸಿಯನೀರನಿಟ್ಟಂತಾಯಿತು. ॥ ೧೨ ॥

ಪರಕೀಯರರಿದನರಿತು ವಿವಿಧವೇಶಗಳನ್ನು
ಧರಿಸಿನಡೆತಂದು ಬಗೆಬಗೆಯುಪಾಯಗಳಿಂದ
**ಭರತಖಂಡ**ದಲಿ ನೆಲೆಯೂರಿದರು; ಇದನು ನೋಡುತ್ತ ಸಮಯವ ಸಾಧಿಸಿ, ॥
ತ್ವರಿತದಿಂದೀಸ್ಟಿಂಡಿಯಾ ಕಂಪೆನಿಯುಬಂದು,
ಪರಿಪರಿಯ ವ್ಯಾಪಾರಸಾಪಾರ ಮುಖದಿಂದ
ಮರುಳುಮಾಡಿದುದೆಲ್ಲ ಭಾರತೀಯರನು ಅಜ್ಞಾನದಲಿ ಮುಳುಗಿಸಿದುದು. ॥ ೧೩ ॥

ಹುಳವಗಾಳದ ತುದಿಗೆ ಕಟ್ಟ ಮೀನುಗಳನ್ನು
ಎಳೆವಂತೆ, ಪರದೇಶವಸ್ತುಗಳ ತೋರಿಸುತ
ಸೆಳೆದುಕೊಂಡರು ಸರ್ವಸಂಪತ್ತುಗಳ ಕಡೆಗೆ **ಭರತಖಂಡ**ವನು ಸಹಿತ; ॥
ತಿಳಿದಿದನು ವಿಕ್ಟೋರಿಯಾರಾಣಿ, ತನ್ನಕೈ
ಕೆಳಗಿನವರಾದ ಕಂಪೆನಿಯವರ ಕರೆಯಿಸುತ
ಫಲಭರಿತವಾದ ಭಾರತಭೂಮಿಯೊಡೆತನವ ಬಲುಮೆಯಲಿ ಕೈಕೊಂಡಳು. ॥ ೧೪ ॥

ಸಂದುದೀಪರಿ ಕೆಲವುಕಾಲ ಸುಖವಾಗಿ, ಅ
ಲ್ಲಿಂದ ಅಧಿಕಾರಿಮಂಡಲವೊಂದು ತಲೆದೋರಿ
ತಿಂದುಪರಿಯಂತ ತನ್ನಿಚ್ಛೆಯಲಿ **ಭರತಖಂಡ**ವನಾಳುತಿಹುದು, ಅದಕೆ ॥
ಸಂದ ಹೆಸರಾಗಿದೆ "ಬಿರೋಕ್ರಸೀ" ಎಂದು, ಅದ
ರಿಂದ **ಭಾರತದ** ಪುರುಷತ್ವವೆಂದೆಂಬುದೇ
ಕುಂದಿಹೋಯಿತು ಮತ್ತೆ ಹೊಸಹೊಸದು ಕಾನೂನು ಕಾಯಿದೆಗಳಾದುವಲ್ಲಿ. ॥ ೧೫ ॥

ಇತ್ತ ಕರ್ಣಾಟಕದ ವಾಯುವ್ಯ ಭಾಗದಲಿ
ವಿಸ್ತಾರವಾದೊಂದು ಹಳ್ಳಿ ಇರುವುದು, ಅದುವೆ
ರತ್ನಾಗಿರಿಯು; ಅಲ್ಲಿ ಗಂಗಾಧರಾಖ್ಯ ಬ್ರಾಹ್ಮಣನೊಬ್ಬನಿರುವನವನ ॥
ಪತ್ನಿ ಪಾರ್ವತಿ ಎಂಬ ಸಾಧ್ವಿ, ಪತಿಸೇವೆಯಾ
ಸಕ್ತಿಯಿಂದನುದಿನವು ಸುಖವಿರುವಳಾದರೂ
ಪುತ್ರರಿಲ್ಲೆಂಬೊಂದು ಚಿಂತೆ ಆಕೆಯ ಮನವ ಹೊತ್ತಿಸುತ್ತಿರುತಿದ್ದುದು. ॥ ೧೬ ॥

ಆದಕಾರಣ ಗಂಡಹೆಂಡಿರಿಬ್ಬರು ಬಹಳ
ಖೇದದಲಿ ಕೆಲವುಕಾಲವ ಕಳೆಯೆ ಬಳಿಕ ಗಂ
ಗಾಧರನು ಜೋಯಿಸರ ಮುಖದಿಂದ ಕೇಳಿಸಲು ಹೇಳಿದರು ಹೀಗೆನ್ನುತ:— ॥

ದ್ವಾದಶಾತ್ಮವ್ರತವ ದಂಪತಿಗಳಿಬ್ಬರೂ
ಸಾಧಿಸಿರಿ, ಸಂತಾನವಾಗುವುದುನಿಮಗೆಂದು,
ಹೋದರವರತ್ತಲಿತ್ತಲು ತನ್ನ ಹೆಂಡತಿಯ ಕರೆದು ಹೀಗೆಂದನವನು. ॥ ೧೭ ॥

ಭಾರ್ಯೆಕೇಳಿಂದುಮೊದಲಾಗಿ ನಾವಿಬ್ಬರೂ
ಸೂರ್ಯನಾರಾಯಣವ್ರತವ ಸಾಧಿಸಲು, ಆ
ಕಾರ್ಯದಿಂದಲಿ ನಮಗೆ ಸಂತಾನವಹುದೆಂದು ಜೋಯಿಸರು ಹೇಳಿರುವರು. ॥
ತ್ವರ್ಯದಿಂದಲಿ ವ್ರತವ ಹಿಡಿಯಬೇಕೆಂದು, ಆ
ಚಾರ್ಯನನು ಬರಮಾಡಿ, ವಿಧಿಯಂತೆ ಗಂಗಾಧ
ರಾರ್ಯ ಪಾರ್ವತಿಯರಿಬ್ಬರು ವ್ರತವ ಸ್ವೀಕರಿಸಿ ಧೈರ್ಯಮನರಾಗಿದ್ದರು. ॥ ೧೮ ॥

ದಾನಧರ್ಮಗಳಿಂದ ಬಡವರನು ತಣಿಸುತ್ತ,
ಮಾನ ಮರ್ಯಾದೆಯಲಿಬಲ್ಲಿದರಗಣಿಸುತ್ತ,
ನ್ಯೂನವಾಗದ ತೆರದಿ ಇಹಪರಗಳೆರಡರಲಿ ದೃಷ್ಟಿಯನ್ನಿಟ್ಟುಕೊಂಡು; ॥
ತಾನು ಪ್ರತಿದಿನದಲ್ಲಿಯೂ ವ್ರತವ ಬಿಡದೆ ಅನು
ಮಾನವಿಲ್ಲದೆ ನಡೆಯಿಸುತ್ತಿರಲು ಕಡೆಗವನ
ಮಾನಿನಿಗೆ ಮುಟ್ಟುಕಟ್ಟಾಯಿತರಿಯಿತು ಮತ್ತೆ ಬಸಿರ ಗುರುತವಳಂಗದಿ. ॥ ೧೯ ॥

ಇದು ಸಮಯವೆಂದು **ವಿದ್ಯಾರಣ್ಯ**ಮುನಿವರನು
ಮುದದಿಂದ ಬಂದವಳ ನಿಷ್ಕಲಂಕಿತವಾದ
ಉದರಪ್ರವೇಶವನು ಮಾಡಿದನು ಮಾನಸವ ಹೋಗುವ ಅರಸಂಚೆಯಂತೆ. ॥
ತದನಂತರದಲಿ ಬೆಳಗಿತು ಬೀಗಿತಲಸಿತಾ
ಸುದತಿಯ ವದನ ದೇಹ ಗತಿಗಳಿದಬಣ್ಣಿಸುವ
ವಿಧವೆಂತು? ಸುಳ್ಳೆನ್ನಬೇಡಿ, ನೀವೇನೋಡಿದರೆ ಖಚಿತವಾಗುತಿತ್ತು. ॥ ೨೦ ॥

**ಭಾರತೀಯ**ರಮನವನಜ್ಞಾನವೆಂದೆಂಬ
ಕಾರುಗತ್ತಲೆ ಮುಸುಕಿರುವುದದನು ತೊಲಗಿಸುವ
ಕಾರಿಯವು ಸಾಮಾನ್ಯರಿಂದಲಾಗುವುದೆ? ಈ ಕರ್ತವ್ಯಮೂಢರಿಂದ? ॥
ಆರಿಗೂ ಸಾಧ್ಯವಾಗದು, ನನ್ನುದರದಾಕು
ಮಾರನೀರೀತಿಯಲಿ ತೊಲಗಿಸುವನೆಂಬುದನು
ತೋರುವಳೊ ಹೇಳೆನಲು ತಳತಳಿಸಿ ತೊಳಗಿ ಬೆಳಗಿದುದವಳವದನರವಿಯು. ॥ ೨೧ ॥

**ಲೋಕಶಿಕ್ಷಕ**ನೆನಲು ಸಾಮಾನ್ಯನೇ? ದುರ್ವಿ
ವೇಕವೃಕ್ಷದ ಬೇರನಗಿದುಗಿದು ಬಿಸುಡುವಾ
**ಲೋಕಮಾನ್ಯ**ನೆ ನನ್ನುದರದಲ್ಲಿ ಬಂದು ನೆಲಸಿರುವನೆಂದಾದಮೇಲೆ, ॥

ಏಕೆ ಯೋಚನೆಯು? ದಿನದಿನವು ಚಿಂತಿಸುತಿದ್ದು
ಸಾಕಾಯಿತಿನ್ನಾದರೂ ವಿಶ್ರಮಿಸುವೆನಂ
ದಾಕೆಯಾಲಸ್ಯದಿಂದಿರುವಳೆಂದೆನಲವಳ ನಡೆಯು ಮೆಲ್ನಡೆಯಾಯಿತು. ॥ ೨೨ ॥

ಭೂಗೋಲದಲ್ಲಿರುವ ನರರೆಲ್ಲರಿಗೆ ಕರ್ಮ
ಯೋಗವನು ಬೋಧಿಸುವ ಲೋಕೋತ್ತರದಕಾರ್ಯ
ಕಾಗಿ ಮಾನವರೂಪವನ್ನುಧರಿಸುವ ಮಹಾಮಹಿಮನೊಬ್ಬನಿಗೆ ತಾಯಿ ॥
ಆಗುವುದೆನಲು ಯಾರವಾನಸದಲಾದರೂ
ಆಗದಿರುವುದೆ ಹರುಷವೆಂಬಂತೆ ಸಂತಸದಿ
ಬೀಗಿದಳೆನಲು ಕೊಬ್ಬಿಯುಬ್ಬಿದಳು ದಿನದಿನಕೆ ಗರ್ಭಪ್ರಭಾವದಿಂದ. ॥ ೨೩ ॥

**ಭರತಭೂಮಾತೆ,** ಈ ಪರಿ ಕ್ಷೀಣವಾದಳೆಂ
ದರಿಯಿಸುತ್ತಿದ್ದ ಪಾರ್ವತಿಯ ಬಡನಡು ನನ್ನ
ತರಳನಿಂದಲಿ ಮುಂದೆ ಹೀಗೆಹೀಗಭಿವೃದ್ಧಿಯಾಗುವುದು ನೋಡಿರೆಂದು, ॥
ಧರೆಯ ಜನರೆಲ್ಲರಿಗೆ ಪ್ರತ್ಯಕ್ಷವಾಗಿ ಮಾ
ದರಿಯ ಪಾಠವ ಹೇಳಿಕೊಡುವ ಗುರುವೆಂದೆಂಬ
ತೆರದಿಂದ ಭರದಿಂದ ದಿನದಿನಕೆ ಬಳೆಬಳೆದು ಹೊಳೆದುದಾಕೆಯ ಗರ್ಭವು. ॥ ೨೪ ॥

ಅರಿವರೆಲ್ಲವರು ಲೋಕರಹಸ್ಯವನು, ಮುಂದೆ
ಬರುವುದದರಿಂದಲೇ **ರಾಷ್ಟ್ರೀಯ ಭಾವನೆಯು,**
**ಭರತಖಂಡ**ವಿದೊಂದೆ **ರಾಷ್ಟ್ರವೆಂ**ದಾಗದಿರದೀ ಮೂರು ಸಂಗತಿಗಳು ॥
ಸರುವಥಾ ಹೀಗೆ ಏಕೀಭವಿಸದಿರವೆಂದು
ಸರುವರಿದಿರಲಿ ಪ್ರತಿಜ್ಞೆಯ ಮಾಡಿತೋರಿಸುವ
ತೆರದಿಂದಲೊಂದುಗೂಡಿದುದವಳ ಬಡನಡುವಿನಲ್ಲಿ ತೋರುವ ತ್ರಿವಳಿಯು. ॥ ೨೫ ॥

ಜನರೆಲ್ಲರಲ್ಲಿದೇಶೋದ್ಧಾರದಾಸೆಯುದು
ಮನೆಮಾಡುವುದು, ಇದ್ದರೀತಿಬದಲಾಗುವುದು,
ಕೊನೆಗಾ**ಸ್ವರಾಜ್ಯ**ಧಾರಾಮೃತವು ಸೂಸುವುದು ನೋಡಿರೀರೀತಿಯಿಂದ! ॥
ಎನುವಂತೆಬಯಕೆ ತಲೆದೋರಿದುದು, ಮತ್ತೆ ಮಾ
ನಿನಿಯ ಮೈಬಣ್ಣ ಬದಲಾವಣೆಯ ಹೊಂದಿದುದು,
ಘನಕುಚದ್ವಯದಲ ಮೃತೋಪಮಕ್ಷೀರವಾರಿಯು ತುಂಬಿ ಬಿಂಬಿಸಿದುದು. ॥ ೨೬ ॥

ತಿಂಗಳಾಗಲು ಗರ್ಭಿಣಿಗೆ ನಾಲ್ಕುಬಳಿಕಲಾ
ಗಂಗಾಧರನು ಪುರೋಹಿತರ ಬರಿಸುತ ಸರ್ವ
ಮಂಗಳೆಗೆ ಸೀಮಂತವನ್ನು ಮಾಡಿಸಿ ಮನೆಗೆಬಂದ ಭೂಸುರ ವರ್ಗಕೆ ॥

ಸಾಂಗವಾಗಿಯೆ ಭೋಜನಾದಿಗಳ ಮಾಡಿಸುತ,
ಮಂಗಲಾಕ್ಷತೆಯು ಪಡಕೊಳ್ಳುತವರಿಂದ, ಅ
ರ್ಧಾಂಗಿಯೊಡಗೂಡಿ ವಂದಿಸುತವರವರಮನೆಗೆ ಕಳುಹಿದನು ವಿನಯದಿಂದ. ॥ ೨೭ ॥
ಮಡದಿ ಗರ್ಭಿಣಿಯಾದ ದಿನದಿಂದಲವಳೊಡನೆ
ನುಡಿಯುತಿದ್ದನು ವೀರಪುರುಷರ ಚರಿತ್ರಗಳ,
ಎಡೆಯೆಡೆಗೆ ಸಾಧುಸಂತರ ದೇವಭಕ್ತ ಮುಂತಾದವರ ವೃತ್ತಾಂತವ. ॥
ಕಡುಮಮತೆಯಿಂದ ಬೋಧಿಸುತಿರಲು ಹೀಗವಳ
ಒಡಲಿನಲ್ಲಿರುವ ಶಿಶುವಿಗೆ ಆಯ್ತು ಸಂಸ್ಕಾರ,
ಪೊಡವಿಯಲಿ ಗಂಗಾಧರನ ಪುಣ್ಯದೇಳಿಗೆಯು ನುಡಿಯಲೇನುಂಟು ಮುಂದೆ? ॥ ೨೮ ॥
ಗಿರಿಜೆಯುದರದಿ ಬಳೆವ ಕಾರ್ತಿಕೇಯನ ತೆರದಿ,
ವರಕವಿಯ ಕೃತಿಯಲಿಹ ಶಾಸ್ತ್ರಾರ್ಥದಂದದಲಿ,
ಚರಿತೆಯೊಳಗಡಗಿತೋರುವ ರಾಜಕೀಯ ವಿಷಯದರೀತಿ, ದಿನದಿನದಲಿ ॥
ನರಲೋಕಶಿಕ್ಷಕನು ಪಾರ್ವತಿಯ ಬಸಿರೆಂಬ
ಬಿರುಸಾದ ಕಂಬದೊಳಗಡೆ ಬಳೆಯುತಿದ್ದನೀ
ಧರೆಯ ಜನರಜ್ಞಾನವೆಂಬುವ ಹಿರಣ್ಯಕಶ್ಯಪನೆದೆಯ ಸೀಳಲೆಂದು. ॥ ೨೯ ॥
ಶೀಲವತಿಗೊಂಬತ್ತು ತಿಂಗಳುಗಳಾಗೆ ಆ
ಮೇಲಿನಾಷಾಢಬಹುಳದ ಷಷ್ಠಿ ದಿನದಲ್ಲಿ,
ಶಾಲಿವಾಹನಶಕವು ಸಾವಿರದ ಏಳುನೂರೆಪ್ಪತ್ತ ಎಂಟರಲ್ಲಿ, ॥
ಮೇಲಾದ ದಿನ ಗಂಡುಮಗನ ಹೆತ್ತುದರಿಂದ
ಭೂಲೋಕವೆಲ್ಲ ಆನಂದಸಾಗರದಲ್ಲಿ
ತೇಲಾಡುತಿದ್ದುದೇನೆನ್ನಲಿ, ಮಹಾತ್ಮರುದಿಸಿದದಿನವೆ ಸುದಿನವಹುದು. ॥ ೩೦ ॥
ಅತ್ರಿಮುನಿಸತಿಗೆ ದತ್ತಾತ್ರೇಯನಂದದಲಿ,
ಇತ್ತದೇವಕಿಗೆ ಶ್ರೀಕೃಷ್ಣನೆಂಬಂದದಲಿ,
ಹೊತ್ತಾರೆ ಮೂಡುಬೆಟ್ಟನಲಿ ಮೂಡುವ ಬಾಲಸೂರ್ಯಬಿಂಬದತೆರದಲಿ; ॥
ಉತ್ತರೋತ್ತರವಾದ ನರರೂಪವನ್ನು ಧರಿ
ಸುತ್ತ, ಹನ್ನೊಂದನೆಯ ಅವತಾರವಿದು ಎನ್ನಿ
ಸುತ್ತ, ತೋರುತ್ತಿತ್ತು ಬಾಲಕನ ರೂಪಲಕ್ಷಣವಿಶೇಷಗಳಿಂದಲಿ. ॥ ೩೧ ॥
"ಗಣಿತ ಸಂಸ್ಕೃತ ವ್ಯಾಕರಣ ಜ್ಯೋತಿಷಾದಿಗಳ
ಕಣಿ" ಎಂದು ಹೆಸರುಗೊಂಡಿರುವ ಗಂಗಾಧರನು
ತನುಜನುದಯವ ಕೇಳಿ, ಸಂತೋಷವನು ತಾಳಿ, ಜನನಮಂದಿರಕೆ ಬಂದು, ॥

ಮನುಜರೂಪಿನಲೋಕಶಿಕ್ಷಕನ ಕಂಡು, ಮನ
ದನುರಾಗದಿಂದವನ ಹಿಡಿದೆತ್ತಿಕೊಂಡು, ಬಾ
ಲನ ರೂಪ ಲಕ್ಷಣ ಸುಧಾರಸವನುಂಡು, ತಾನಿಂತೆಣಿಸಿಕೊಳುತಿದ್ದನು. ॥ ೩೨ ॥

ಈ ಮುಹೂರ್ತದಲಿ ಹುಟ್ಟಿರುವಕಾರಣದಿಂದ
ಭೂಮಂಡಲದಲ್ಲಿ ಪ್ರಖ್ಯಾತನಾಗುತ್ತ, ನಿ
ಷ್ಕಾಮುಕರ್ಮದ ಮೂರ್ತಿಮಂತ ದೃಷ್ಟಾಂತವೆಂದಾಗದಿರನಷ್ಟಲ್ಲದೆ; ॥
ಸೌಮನಸ್ಯದಿ ತನ್ನ ಕರ್ತವ್ಯವೆನ್ನುತ ವಿ
ರಾಮವಿಲ್ಲದೆ ದೇಶಸೇವೆಯನು ಮಾಡುತ್ತ,
ಈ ಮಾನವರ ವರ್ಗಕೀತ ತಿಲಕಪ್ರಾಯನಾಗದಿರನೆಂದರಿದನು. ॥ ೩೩ ॥

ನೆಲದಲಿರುವವರೆಲ್ಲರಿಂದಲಿವನೇ ಮುಂದೆ,
ತಿಳಿವು, ಸುವಿಚಾರ, ದೃಢನಿಶ್ಚಯಾದಿಗಳಲ್ಲಿ
ಬಲವಂತನಾಗದಿರನೆಂದರಿದು ಹನ್ನೊಂದನೆಯದಿನದ ಸುಮುಹೂರ್ತದಿ. ॥
ಲಲನೆಯೊಡಗೂಡಿ ಲೌಕಿಕದಾಚರಣದಿಂದ,
ಕುಲಪುರೋಹಿತನ ವೇದೋಕ್ತ ನಿಯಮಗಳಿಂದ,
ಬಲವಂತರಾಯನೆಂದನ್ವರ್ಥ ನಾಮಕರಣವನಂದು ಮಾಡಿಸಿದನು. ॥ ೩೪ ॥

ಅಂದಿನಿರುಳಲ್ಲಿ ನೆರೆಹೊರೆಯ ಹೆಂಗುಸರೆಲ್ಲ
ಬಂದು ದೇಶೀಯ ಸಕ್ಕರೆಯನುಣಿಸುತ, ಪ್ರೀತಿ
ಯಿಂದಲನ್ನಪ್ರಾಶನವ ಮಾಡಿಸುತ್ತಲಾಮೇಲೆ ಅತ್ಯಾನಂದದಿ, ॥
ತಂದು ಬಾಲಕನ ತೊಟ್ಟಿಲಲಿಟ್ಟು ನೆಲ್ಲುಡಿಗೆ
ಬಂದುದೇ ಜೋಗುಳವದಾಗೆ ಬಹಳೋಲ್ಲಾಸ
ದಿಂದ ತೂಗುತ ಹಾಡಿದರು, ತಾರ, ಮಂದ್ರ, ಮಧ್ಯಮವೆಂಬ ಭೇದದಿಂದ. ॥ ೩೫ ॥

ಬಾಲ ಗಂಗಾಧರಗೆ ಜೋ, ಸ್ವದೇಶೋನ್ನತಿಯ
ಮೂಲಪುರುಷನಿಗೆ ಜೋ, ಭಾರತತಮೋಹಾರಿ
ಬಾಲಸೂರ್ಯಪ್ರಭಾಮಂಡಲಗೆ, ಬಲವಂತರಾಯ ತಿಲಕನಿಗೆ ಜೋ, ಜೋ, ॥
ಶೀಲವಂತನಿಗೆ ಜೋ, ಕರ್ತವ್ಯಮೂಢತೆಯ
ಸೀಳುವಾತನಿಗೆ ಜೋ, ಸ್ವಾರಾಜ್ಯಕುಂಭವನು
ಮೇಲೆತ್ತಿತರುವ ಧನ್ವಂತರಿಗೆ ಜೋ, ರಾಷ್ಟ್ರಸೂತ್ರಧಾರನಿಗೆ ಜೋ ಜೋ. ॥ ೩೬ ॥

ಹೀಗೆ ತೊಟ್ಟಲ ತುಂಬಿಸುತ್ತ ಜೋಗುಳ ಹಾಡಿ,
ನಾಗವೇಣಿಯರೆಲ್ಲ ತಂತಮ್ಮ ಮನೆಗಳಿಗೆ
ಹೋಗಿಬರುತಿದ್ದು, ನೋಡುತಲಾಡಿಸುತ ಮೊಲೆಯನೂಡಿಸುತಲಿರುತಿದ್ದರು. ॥

ಆಗ ದಿನದಿನಕೆ ಬಳೆಯುತ್ತಿದ್ದನೆಂತೆನಲು,
ಈಗಿನವರಲಿ ಸ್ವರಾಜ್ಯದತತ್ವ ಬಳೆವಂತೆ,
ಯೋಗಿಗಳ ತಿಲಕನಾ ಪರತತ್ವವೇ ಮೂರ್ತಿಮಂತವಾಗಿರುವಂದದಿ. ॥ ೩೭ ॥

ಎರಡನೆ ಸಂಧಿ ಸಂಪೂರ್ಣ.

**ಸಂಧಿ ಎರಡಕ್ಕೆ ಪದ್ಯ ೪೮.**

---

# ಮೂರನೆ ಸಂಧಿ

**ಸೂಚನೆ:**

ಬಾಲಗಂಗಾಧರನು ಬಾಲ್ಯವನು ಕಳೆದು, ವಿ
ದ್ಯಾಲಯದಿ ಮಾನ್ಯತೆಯ ಹೊಂದಿ, ಪಿತನಿಂದಲೇ
ಕೇಳುತ್ತ ದೇಶಭಕ್ತಿ ಗೃಹಸ್ಥಧರ್ಮಗಳನೆರಡನ್ನು ಕೈಕೊಂಡನು. ॥

ಕೇಳುವುದು ಶೌನಕರು ಮುಂದಿನ್ನು ಕಿವಿಗೊಟ್ಟು,
ಹೇಳುವೆನು ನಾನವನ ಬಾಲಲೀಲೆಗಳನ್ನು,
ಬಾಲೆಪಾರ್ವತಿಯು ಮನೆಗೆಲಸದೆಡೆಯಲ್ಲೊಂದು ನಿಮಿಷವಿರಲಾ ಸಮಯದಿ, ॥
ಬಾಲಕನ ವಿಷಯವಲ್ಲದೆ ಮನದಿ ಬೇರೊಂದು
ಆಲೋಚನೆಯನಿಡದೆ, ಹಗಲಿರುಳು ಬೆಂಬಿಡದೆ,
ಪಾಲಿಸುತ್ತಿದ್ದಳೇನೆಂದು ಹೇಳಲಿ ಪುತ್ರವಾತ್ಸಲ್ಯದಂದವನ್ನು? ॥ ೧ ॥

ನೋಡುವಳು, ಮಗನ ಹಿಡಿದೆತ್ತಿ ತಕ್ಕೈಸಿ ಮುಂ
ಡಾಡುವಳು, ಬಡವಾದನೆಂದಡಿಗಡಿಗೆ ಮೊಲೆಯ
ನೂಡುವಳು, ಹಾಡುವಳು, ಆಡುವಳು, ಸುತನ ಕೊಂಡಾಡುವಳು ಪ್ರೀತಿಯಿಂದ. ॥
ಬೇಡುವಳು ದಮ್ಮಯ್ಯ ಅಳಬೇಡವೆಂದು, ಓ
ಡಾಡುವಳು ಕಣ್ಮುಚ್ಚಲೇನಾಯಿತೆಂದು, ಮರು
ಳಾಡುವಳು ಬಾಡುವಳು, ಕೋಡುವಳು, ಕಣ್ದೆರೆಯೆ ಕೂಡುವಳು ಹೆರುಷದಿಂದ. ॥ ೨ ॥

ಅಳುವನೊಮ್ಮೊಮ್ಮೆ ಲೋಕದ ಕಷ್ಟಗಳ ನೆನೆದು,
ಕಳಕಳಿಸಿ ನಗುವನಿದು ದೈವಕೃತವೆಂದರಿದು,
ಮುಳಿವನೆಲ್ಲರಿಗೆ ದೇಶೋದ್ಧಾರಕಾಗಿ ದೃಢನಿಶ್ಚಯವ ಮಾಡಿರೆಂದು, ॥
ತಳುವದಿಹನೊಂದೆರಡುನಿಮಿಷ ಯೋಚಿಸುತಿದನೆ,
ತಿಲಕನಿಗೆ ಬೇರೆಣಿಕೆಯುಂಟೆ ಹೇಳೆಂಬಂತೆ
ಹೊಳೆಯುತಿತ್ತಾ ಬಾಲಚೇಷ್ಟೆ, ಸರ್ವರ ಮನವನೆಳೆಯುತಿತ್ತವನ ಬಳಿಗೆ. ॥ ೩ ॥

ಒಂದೆರಡು ವರುಷವಾಗಲು ಬಾಲನಂಬೆಗಾ
ಲಿಂದ ಹರಿಯುತ ಮನೆಯಲತ್ತಿತ್ತ ತಿರುಗುತಿರೆ,
ಬಂದವರ ಬಳಿಗೈದಿ ಕುಳಿತು, ಯೋಗಕ್ಷೇಮಗಳ ವಿಚಾರಿಸುತ ಬಳಿಕ, ||
ಬಂದುದಿದು ಲೇಸಾಯ್ತು ನಾವು ದೇಶದ ಮೇಲ್ಮೆ
ಗಿಂದುಮೊದಲಾಗಿ ಸಾಧಿಸುವುದೇ ಕರ್ತವ್ಯ
ವೆಂದು ಹೇಳುತ್ತಿರುವನೆಂಬಂತೆ ತೊದಲುತೊದಲಾಗಿ ಗುಣುಗುಟ್ಟುತಿಹನು. || ೪ ||

ಬಾಲನಿಗೆ ಮೂರುನಾಲ್ಕಾಗೆ ವರ್ಷಗಳು, ಆ
ಮೇಲ್ಕೈದನೆಯ ವಯಸ್ಸಿನಲಿ ಹೊಯ್ಗೆಯ ಹಿಡಿಸಿ,
ಸಾಲೆಯಲಿ ಸೇರಿಸುತಲೊಂಬತ್ತನೆಯ ಪ್ರಾಯದಲ್ಲಿ ಉಪನಯನವನ್ನು, ||
ಲೀಲೆಯಲಿ ಮಾಡಿಸುತ, ಮಾರಣೆಯ ವರುಷವಾ
ಶಾಲಿವಾಹನ ಸಾವಿರದ ಏಳುನೂರಾದ
ಮೇಲೆ ಎಂಬತ್ತೆಂಟರಲಿ ತಂದೆಯೊಡನೆ ಪೂನಾಪಟ್ಟಣಕೆ ಹೋದನು. || ೫ ||

ಮುಂದಲ್ಲಿ ವಿದ್ಯಾಲಯಕೆ ಸೇರಿದನು ತಿಲಕ
ನೊಂದುದಿನ ಹುಡುಗರೆಲ್ಲರು ನೆಲಗಡಲೆಕಾಯಿ
ತಿಂದು ಸಿಪ್ಪೆಯನಲ್ಲಿ ಚಲ್ಲಿರಲು, ಕಾಣುತಾ ತರಗತಿಯುಪಾಧ್ಯಾಯನು ||
ಬಂದು ಹುಡುಗರನೆಲ್ಲ ಹೆದರಿಸುತ, ಅವರ ಕೈ
ಯಿಂದಲೇ ತೆಗೆಯಿಸಿದನಾಗ ನಮ್ಮಾ ತಿಲಕ
ನೆಂದನಿದಮುಟ್ಟಲಾಗದು, ತಿಂದವರೆ ತೆಗೆವರೆಂದು ಗಂಭೀರನಾಗಿ. || ೬ ||

ಇನ್ನೊಮ್ಮೆ ಸಾಲೆಯಲ್ಲಾರೆಂದು ತಿಳಿಯದೊಂ
ದನ್ಯಾಯನಡೆಯುಲದಕಾಗಿ ಹುಡುಗರು ಪೆಟ್ಟು
ತಿನ್ನಬೇಕೆಂದು ನೇಮಿಸಲು, ಬಲವಂತನು ಮನೋಬಲವನುಪಯೋಗಿಸಿ, ||
“ನನ್ನಕೈ ಪೆಟ್ಟಗೊಳಗಾಗುವುದು ಸರಿಯಲ್ಲ”
ಎನ್ನುತಲ್ಲಿಂದ ಹೊರಡಲು ಹುಡುಗರೆಲ್ಲರೂ
ಬೆನ್ನನೇ ಹೋದರೆಂಬೆನಲು ಈಶಕ್ತಿ ಸಾಮಾನ್ಯರಲ್ಲಿರುವುದೇನು? || ೭ ||

ಬೆಳೆಯಗುಣ ಮೊಳೆಯಲ್ಲೆ ತಿಳಿಯದಿರುವುದೆ? ನಮ್ಮ
ಬಲವಂತನಾದರೂ ಕಂಡುದನು ಕಂಡಂತೆ
ಅಳುಕದುಸುರುವನು ಲೆಕ್ಕಿಸುವನೇ? ನಿಃಸ್ವಾರ್ಥಿಗುಂಟೆಭಯ ಲೋಕದಲ್ಲಿ? ||
ಬಳಿಕೊಂದು ದಿನ ತನ್ನ ತಂದೆ ಗಂಗಾಧರನ
ಬಳಿಗೈದಿ, ದೇಶಭಕ್ತಿಯ ರೀತಿನೀತಿಗಳ
ತಿಳುಹಬೇಕೆಂದು ಕೈ ಮುಗಿದುಬೇಡಲು ಮಗನ ಸೆಳೆದಪ್ಪಿಕೊಳುತೆಂದನು. || ೮ ||

ಮಕ್ಕಳೆಂದರೆ ಮಗನೆ! ಅಶನಘಾತುಕರಾದ
ಮಕ್ಕಳಲ್ಲವು; ಅವರು ಇದ್ದು ಇಲ್ಲದ ಫಲವು,
ಮಕ್ಕಳಾರೆನೆ, ಮಾತೃದೇಶಭಾಷಾಸೇವೆಯನು ಮಾಡಿ ಆ ಕುಂತಿಯ ॥
ಮಕ್ಕಳಂದದಿ ಹೊಳೆವ ಕೀರ್ತಿಯನು ತರುವವರು,
ಮಕ್ಕಳ ಋಣವ ತೀರಿಸುವಧೀರರುಳಿದಿರುವ
ಮಕ್ಕಳೆನೆ, ಮರದೊಳಗೆ ಹುಳುಹುಟ್ಟಿ, ಮರವನೇ ಕೊರೆದುತಿಂಬಂತಾಗದೆ? ॥ ೯ ॥

"ದೇವಭಕ್ತಿ ಸ್ವದೇಶಭಕ್ತಿ" ಎಂಬೆರಡರಲಿ
ಭಾವಿಸಲು ದೇಶಭಕ್ತಿಯನೊಂದನಾಚರಿಸೆ,
ದೇವತಾಭಕ್ತಿಯದರಲಿ ಸಮ್ಮಿಳಿತವಾಯಿತೆಂಬುದಕೆ ಸಂದೇಹವೆ? ॥
ದೇವರೀವನು ಜನ್ಮ, ಪೋಷಿಸುವುದೀದೇಶ,
ದೇವರಿಂದಲಿಬುದ್ಧಿ, ದೇಶದಿಂದಭಿವೃದ್ಧಿ,
ದೇವರಾಯುಷ್ಯವನು ಕೊಡುವನದು ಬೆಳಗುವುದು ದೇಶಮಾತೆಯ ಮಡಿಲಲಿ. ॥ ೧೦ ॥

ದೇವರಲಿನಿಷ್ಕಾಮಕರ್ಮ, ದೇಶದಿಧರ್ಮ,
ದೇವರಿಂದಲಿ ಮುಕ್ತಿ, ದೇಶವದಕಿಹಯುಕ್ತಿ,
ದೇವಗೃಹದಲಿ ಭೇದವಿಲ್ಲ, ದೇಶದ ಸ್ವರ್ಗದಲ್ಲಿಯು ಪ್ರಪಂಚವಿಲ್ಲ. ॥
ದೇವರನು ದೇಶವನು ಈ ತೆರದಲನ್ಯೋನ್ಯ
ಭಾವದಿಂದಲಿತಿಳಿಯೆ ಭೇದವಿಲ್ಲಾದರೂ
ದೇವರವ್ಯಕ್ತನಾಗಿಹನು ಪಂಚೇದ್ರಿಯಕೆ, ದೇಶವೇಸುವ್ಯಕ್ತವು. ॥ ೧೧ ॥

ದೇಶಭಕ್ತಿಗೆ ಶ್ರವಣ, ಕೀರ್ತನ, ಸ್ಮರಣವು; ವಿ
ಶೇಷವಾಗಿಹ ಮೂರು ಸಾಧನಗಳವುಗಳಲಿ
ದೇಶದ ಚರಿತವೊಂದು, ಕೀರ್ತನವೆರಡು, ಅದರ ಮನನ ಮೂರನೆಯದಾಗಿ, ॥
ತೋಷದಲಿ ಕೇಳುತ್ತ, ಹೊಗಳುತ್ತ, ನೆನೆಯುತ್ತ,
ಸಾಸಗೈಯಲು ಮತ್ತೆ ಕಾರ್ಯದಕ್ಷತೆ ಎನ್ನು
ವಾಸುಗುಣವವನಲ್ಲಿ ಮನೆಮಾಡಿ ನೆಲಸುವುದು, ಜಯಲಕ್ಷ್ಮಿ ಕೈಹಿಡಿವಳು. ॥ ೧೨ ॥

ಪರದಾಸ, ಹರಿದಾಸ, ದೇಶಮಾತೆಯದಾಸ,
ಪರಿಕಿಸಲು ದಾಸರಲಿ ಮೂರುತೆರವಿಹುದಿಲ್ಲಿ,
ಪರದಾಸನೇ ಪಾಪಿ. ಹರಿದಾಸನುತ್ತಮನು, ದೇಶಮಾತೆಯದಾಸನು ॥
ಧರೆಯಲ್ಲಿ ಶ್ರೇಷ್ಠನಿಹಪರಗಳೆರಡಾತನಿಗೆ,
ಹರಿದಾಸನಾದವಗೆ ಪರಲೋಕ ಒಂದಿಹುದು,
ಪರದಾಸನೆಂಬವನು ಇಹಪರಗಳಿಲ್ಲದಿಹ ಪರದೇಶಿಯಾಗಿರುವನು. ॥ ೧೩ ॥

ದೇಶಬಂಧುಗಳೆಲ್ಲ ತನ್ನ ಬಂಧುಗಳೆಂದು,
ದೇಶಕಾರ್ಯಗಳೆಲ್ಲ ತನ್ನ ಕಾರ್ಯಗಳೆಂದು,
ದೇಶಕ್ಕೆ ಬಂದಕಂಟಕವೇ ತನಗೆ ಬಂದ ಕಂಟಕವೆನುತ್ತ ತಿಳಿದು, ||
ದೇಶದಭಿವೃದ್ಧಿಯೇ ತನ್ನದೊಂದಭಿವೃದ್ಧಿ,
ದೇಶವೇ ತನ್ನ ಮನೆಮಾರೆಂದು ತಿಳಿದವನು
ದೇಶಮಾತೆಯ ದಾಸನೆನಿಸಿ, ಮೇಲಾದವನು ತಾನಾಗಿರಂಜಿಸುವನು. || ೧೪ ||

ಲೋಕಮಾನ್ಯತೆ ರಾಜಮಾನ್ಯತೆಗಳೆಂಬುವೀ
ಲೋಕದಲ್ಲೆರಡು ಮಾನ್ಯತೆಗಳಿಹವವುಗಳಲಿ
ಆಕರ್ಷಣೀಯವಾಗಿರುವುದದು ಸರಿ ರಾಜಮಾನ್ಯತೆಯು; ಆದರಿಲ್ಲಿ, ||
ಲೋಕಮಾನ್ಯತೆ ಎಂಬುದಮೃತಸೇಚನವದುವೆ
ಸಾಕಾರವಾದಸಶರೀರಸ್ವರ್ಗಪ್ರಾಪ್ತಿ!
ಬೇಕಾದುದಿದುವೊಂದೆ, ನರಗೆ ಕೈಸೇರುವುದು ಲೋಕಸೇವೆಯಮುಖದಲಿ. || ೧೫ ||

ಏನೇನು ಮಾಡಿದರು ಎತ್ತೆತ್ತಹೋದರೂ
ಏನೇನು ಸಂಕಟವು ಬಂದೊದಗಿದರು ತನಗೆ
ತಾನು ಕೈಕೊಂಡಿರುವ ದೇಶಸೇವೆಯನು ಕೊನೆಗಾಣಿಸದೆ ಬಿಡಬಾರದು. ||
ಮಾನಸಿಂಹನು ಪ್ರತಾಪನ ಕೆಡಿಸಬೇಕೆಂದು
ಏನೆಲ್ಲಮಾಡಿದನು! ಎಲ್ಲಿಕೊನೆಯಾಯ್ತುದಕೆ?
ನಾನು ನನಗೆಂಬ ಸ್ವಾರ್ಥವನಿಡದ ಮಾನವನಿಗೇನುಬೇಕಾದರಿಹುದು. || ೧೬ ||

ಮಾತೃಪಿತೃ ಗುರುರಾಜ ದೇವಭಕ್ತಿಗಳೆಲ್ಲ
ಮಾತೃದೇಶದ ಭಕ್ತಿ ಎಂದೆಂಬ ಕನಕದ ಸು
ಸೂತ್ರದಲಿ ಸುರಿದರತ್ನಗಳು, ಅದರಿಂದಲೇ ಇಟಲಿ ದೇಶದಲಿ ಹಿಂದೆ, ||
ಸತ್ಯಧರ್ಮವು ಕೆಡುವುದನು ನೋಡಿ ಸೈರಿಸದೆ
ಕ್ಷಾತ್ರಧರ್ಮವನು ವಹಿಸುತ್ತ ಹೋರಾಡಿದನು
ಧಾತ್ರಿಯಲಿ ಆ ಮಝ್ಝಿನಿಯೇದೇಶಭಕ್ತರಲಿಸ್ಮರಣೀಯನಾದನಂದು. || ೧೭ ||

ಇವನು ಬ್ರಾಹ್ಮಣನು, ಕ್ಷತ್ರಿಯನಿವನು, ವೈಶ್ಯನಿವ
ನಿವನು ಶೂದ್ರನು, ನೋಡಲಿವನು ಜನಿವಾರದವ
ನಿವನು ಜನಿವಾರವಿಲ್ಲದ ಜಾತಿ, ಎಂದುಂಟೆ ಮಾತೃದೇಶದಸೇವೆಗೆ? ||
ಕವಲುಮನವನು ಮಾಡದೊಂದೇ ದೃಢವ್ರತದ
ತವಕದಲಿ ನಡೆಯಿಸುವನಾವನಾಪುಣ್ಯಾತ್ಮ
ನವನೇ ಸುಪುತ್ರನೆಂದೆನಿಸುವನು, ಕೀರ್ತಿಯನುಗಳಿಸುವನು ಲೋಕದಲ್ಲಿ. || ೧೮ ||

ಸೋಜಿಗವನೇನ ಹೇಳುವೆನವನಮನವೆಂಬ
ಸೂಜಿಕಲ್ಲೆಲ್ಲವನ್ನಾಕರ್ಷಿಸಿತು, ಮುಂದೆ
ರಾಜಕೀಯೋನ್ನತಿಯು ಕೈಗೂಡಬೇಕಿದಕಿದುವೆ ಮೂಲವದರಿಂದಲಿ; ॥
ಯಾಜಕನು ತಾನಾಗಿ, ಆತ್ಮಯಜ್ಞವನಮಾಡಿ,
ರಾಜಕಾರಣವನುದ್ಧರಿಸುತದರಿಂದ "ಸ
ರ್ವೇಜನಾಃಸುಖಿನೋಭವಂತು" ಎಂಬುದ ಮಾಡಿ ತೋರಬೇಕೆಂದಿದ್ದನು. ॥ ೧೯ ॥

ಇರಬೇಕು ಹೀಗಿರುವ ತಂದೆತಾಯಿಗಳವರಿ
ಗಿರಬೇಕು ಹೀಗಿರುವ ಮಕ್ಕಳವರೇ ಮುಂದೆ
ಬರಬೇಕು ಹೊರತಲ್ಪನೈಶ್ವರ್ಯ ಅರ್ಧರಾತ್ರಿಯಲಿ ಕೊಡೆಹಿಡಿಸದಿಹುದೆ? ॥
ಅರುಹಲೆಂತಿದ! ಮುಂದವನ ತಾಯಿತಂದೆಗಳು
ಸುರಲೋಕಯಾತ್ರೆಯನು ಮಾಡಿದರು, ಬಳಿಕಿವನು
ತರುಣನಾದನು, ದಕ್ಷಿಣ ಪ್ರೌಢಶಾಲೆಯನು ಸೇರಿ ಅಭ್ಯಾಸಿಸಿದನು. ॥ ೨೦ ॥

ಚರಿತೆ, ರಾಸಾಯನಿಕ, ಗಣಿತಶಾಸ್ತ್ರಾದಿಗಳು
ಕರತಲಾಮಲಕವಾದುವು, ಸರಸ್ವತಿಯೇನು
ಹರಸಿಹೋಗಿರಬೇಕು, ನೋಡಿದೊಡನೆಯೆ ಬರುವುದೆಂದರಿದು ಸಾಮಾನ್ಯವೆ?
ಮರೆತೆ ವಿದ್ಯಾರಣ್ಯಮುನಿ ಎಂಬುದನು, ಜಗ
ದ್ಗುರುವಲ್ಲವೇ? ನೋಡುವವರ ಕಣ್ಣಿಗೆ ಮಣ್ಣ
ನೆರಚುತಿದ್ದನು, ತನ್ನ ಸಹಪಾಠಿಗಳ ತನ್ನ ದಾರಿಗೆಳೆಯುತ್ತಿದ್ದನು. ॥ ೨೧ ॥

ಕೇರೊನಾನಾಪಂತರಂತ್ಯಸಮಯದಲವರ
ಲೀರೀತಿ ಕೇಳಿದರು ಮಿತ್ರರೊಬ್ಬರು "ನಾಳೆ
ಗಾರ ನಿಲ್ಲಿಸಿ ಹೋಗುವಿರಿ ನಿಮ್ಮ ಬದಲಿಗೆ"ಂದೆನಲು ನಮ್ರ ತಿಲಕನ ॥
ತೋರಿಸುತ ಹೇಳಿದರು "ಇದು ಗಣಿತಶಾಸ್ತ್ರದಾ
ಸಾರವನು ತೆಗೆದು ಜಾಗ್ರತೆಯಾಗಿ ಮಾಡಿರುವ
ಮೂರುತಿಯು; ಮುಂದಿನವರಿದ ಪೂಜಿಸುತ ತಾವು ಕೃತಕೃತ್ಯರಹರೆ"ನ್ನುತ. ॥ ೨೨ ॥

ಸಂದುದೀ ರೀತಿಯಲಿ ಕೆಲಗಾಲ, ಆಮೇಲೆ
ಒಂದು ದಿನ ವರ್ಷಾಂತ್ಯದಲಿ ಪ್ರವಾಸವ ಮಾಡ
ಲೆಂದು ಗುರುಶಿಷ್ಯರೊಡಗೂಡಿ ಹೋದರು, ನೋಡಿದರು ದೇಶದೇಶಗಳನು. ॥
ಮುಂದೆ ತೋರಿದುದವರ ಕಣ್ಣಿಗೀಡಾಗಿ ಬಲು
ಸಾಂದ್ರವಾಗಿರುವ ಸೊಗಸಾದ ಉಪವನವದರ
ಸೌಂದರ್ಯವನು ಕಂಡು ಮೆಚ್ಚಿ, ಸಂತೋಷದಿಂದದರೊಳಗೆ ಹೊಕ್ಕರಂದು. ॥ ೨೩ ॥

ತಿಳಿಗೊಳದಿ ಮುಳುಗಿ ಸ್ನಾನವ ಮಾಡಿ ಬೇಸಗೆಯ
ಜಳವ ಹೋಗಾಡಿಸುತ, ಮುಂದೆ ಕಾಣುವ ಮರದ
ತಳದಲ್ಲಿ ಕುಳಿತು, ತಂತಮ್ಮಲೊಂದೊಂದು ಪ್ರಸ್ತಾಪಗಳನೆತ್ತುತಿರಲು, ||
ತಿಲಕನಲ್ಲಿಂದೆದ್ದು,ಮುಂದೆ ಕಾಣುವ ದೊಡ್ಡ
ಶಿಲೆಯ ತುದಿಯೇರಿ, ಸುತ್ತಲು ನೋಡುತಲ್ಲಿರುವ
ಗೆಳೆಯರಸ್ನುದ್ದೇಶಿಸುತ್ತ ಕೇಳುವುದೆಂದು ಕಳಕಳಿಯಲಿಂತೆಂದನು. || ೨೪ ||

ಭಾರತವೆ! ನಿನಗೆ ಮೊದಲಿದ್ದ ವೈಭವವೆಲ್ಲ
ಈರೀತಿ ಹಾಳಾಗಿ ಹೋಯಿತೇ! ನಿನ್ನಯ ಕು
ಮಾರರೆಲ್ಲರು ನಪುಂಸಕರಾದರೇ! ಎಂದು ಶೋಕಿಸುವ್ವವೆಂಬಂದದಿ; ||
ತೋರುವೀ ಮಾಮರವನಾಚೀಚೆಯಲಿಬಂದು
ಸೇರಿ ಕೂಗುವ ಕೋಗಿಲೆಗಳೆನ್ನ ಮನವನ್ನು
ಸೂರೆಗೊಂಡುವು. ಮನದಲಾಲೋಚಿಸಿದರೆ ಕಣ್ಣೀರು ಸುರಿಯುತ್ತಿರುವುದು. || ೨೫ ||

ಸಾಕುಸಾಕಾಯಿತಜ್ಞಾನಿಗಳ ಸಹವಾಸ!
ಏಕೆ ನಾವಲ್ಲಿರುವುದದರಿಂದ ನಮ್ಮಯ ವಿ
ವೇಕವೇ ಗಾಳಿಗಂಟಾಗದಿರದೆಂದು ದೇಶೀಯ ಪಂಡಿತರೆಲ್ಲರು ||
ಏಕೀಭವಿಸುತಿಲ್ಲಿ ನೆರೆದೆಲ್ಲ ವಿಷಯಗಳ
ಮಾಕಂದನಲ್ಲಿ ದೂರುವರೊ ಹೇಳೆಂದೆನಲ
ನೇಕ ಪಂಡಿತಹಕ್ಕಿಗಳು ಬಂದು ಸೇರಿ ಗಜಬಜಿಸುತಿವೆ ಮಾಮರದಲಿ. || ೨೬

ಹಳೆಯ ಪಾಂಡಿತ್ಯವೇ ಹಾಳಾಗಿ ಹೋಗಲದು
ತಿಳಿದವರು ನಾವು, ನವನಾಗರೀಕತೆಯ ಮೆ
ಟ್ಟಲನೇರಿ ನಿಂತಿಹೆವು; ನಮಗಾರು ಸರಿ? ಎಂದು ತೂಗಿ ತೊನೆದಾಡಿ ನೋಡಿ; ||
ಹುಲು ಮನುಜರಿಂಗ್ಲೀಷನರಿಯದಿಹ ಸಾಮಾನ್ಯ
ರಲಿ ಮಾತನಾಡುವುದು ಮಾನವಲ್ಲೆಂಬಂತೆ
ಕೊಳದತಡಿಯಲಿ ಕಣ್ಣು ಮುಚ್ಚಿ ನಿಂತಿರುವ ಬಕಪಙ್ತಿ ಕಾಣುತ್ತಿರುವುದು. || ೨೭

ಭರತಖಂಡದಲಿರುವ ಜನರೆಲ್ಲವರು ಕೀಳು
ತರಗತಿಯವರು, ಕಾಡುಜನರಂತಿರುವರವರ
ಸರಿಸಮಾನತೆಯಿಂದ ನೋಡಿದರೆ ನಮ್ಮ ಗೌರವಕೆ ಕುಂದಹುದೆನ್ನುತ; ||
ಸರಿದು ಪ್ರತ್ಯೇಕವಾಗಿಹ ಆಂಗ್ಲೊ ಇಂಡಿಯನ್
ದೊರೆಗಳಂತಿತರ ಜಂತುಗಳಿಂದ ಬೇರಾಗಿ,
ಇರುತ ಬಂಡೆಯನೇರಿ ಕುಳಿತ ವಾನರಕುಲವು ತೋರುತಿದೆ ಕಣ್ಣೆದಿರಿಗೆ. || ೨೮

ಊರಿಗೇ ಬೇಲಿ ಹಾಕುವ ಕಾರ್ಯವೆಂದರದು
ಘೋರವಲ್ಲವೆ? ಸಾರ್ವಜನಿಕ ಕೆಲಸಗಳಿಗೇನ್
ಪಾರವುಂಟೇ? ಆದ್ದರಿಂದ ಹೊಟ್ಟೆಯ ಹೊರೆವುದೇ ನಮ್ಮ ಕರ್ತವ್ಯವು. ॥
ಈ ರೀತಿ ನುಡಿವ ನಮ್ಮಯ ಶಾಂತಪಕ್ಷದ ವಿ
ಚಾರಗಳನನುಕರಿಸಿ, ನಡೆವುವೋ? ಎಂಬಂತೆ
ತೋರುತಿದೆ ಹೊಟ್ಟೆಯಾತುರದಿಂದ ತಿರುಗುತಿಹ ತೋಳಗಳ ಹಿಂಡೆಲ್ಲಿಯು. ॥ ೨೯ ॥

ಕ್ರೂರಜಂತುಗಳಾದರೂ ಸಜಾತಿಗೆ ದಯವ
ತೋರುತ, ವಿಜಾತೀಯ ಮೃಗಗಳನು ಕೊಲ್ಲುವುವು,
ಧಾರಿಣಿಯಲಿವುಗಳೂ ಪ್ರಕೃತಿಹಿತವಾಗಿಯೇ ಬಾಳುತಿವೆ, ಎನ್ನ ಬಹುದು. ॥
ಯಾರೂ ಸಮಾನರಲ್ಲೀ ಮನುಷ್ಯರ ಕುಲಕೆ,
ಬೇರೇನು; ತಮ್ಮವರನೇ ಹಿಡಿದು ಪೀಡಿಸುವ
ಮಾರಕರು, ವಿಕೃತಿಪೂಜಕರಿವರು, ಫಲವೇನು ನರಜನ್ಮವನು ಪಡೆದರೂ? ॥ ೩೦ ॥

ಕಾಡುಮೃಗಗಳು ಕೂಡ ಒಗ್ಗಟ್ಟನಿಂದಲೇ
ಕೂಡಿ ನಡೆವುವು, ಇದನು ನೋಡಿದರೆ ಮಾನವರ
ಮೂಢತನವೇ ವ್ಯಕ್ತವಾಗುವುದು, ತಿಳುವಳಿಕೆ ಇದ್ದರೂ ತಂತಮ್ಮಲಿ ॥
ಚಾಡಿಚಾಟುಗಳಿಂದ ಭೇದ ಹುಟ್ಟಿಸಿ, ಜಗಳ
ವಾಡುವುದ ನೋಡಿದರೆ ಮನಗುದಿವುದಯ್ಯಯ್ಯೊ!
ನಾಡೊಳಗೆ ಚರಿಸುತಿಹ ಮೃಗಗಳಿವರೆಂದರೂ ಕಡಮೆಯಾಗುವುದಲ್ಲವೆ? ॥ ೩೧ ॥

ಹೀಗೆ ಭಾಷಣವನ್ನು ಮುಗಿಸುತ್ತ ಮನದ ಉ
ದ್ವೇಗವನು ಹೊರಗೆಡಹುತಲ್ಲಿಂದ ಕೆಳಗಿಳಿದು,
ಹೇಗಾಗುವುದುಮುಂದೆ ದೇಶಾಭಿವೃದ್ಧಿ? ಎಂಬೊಂದೇ ಮನಸ್ಸಿನಿಂದ; ॥
ಆಗಾಗ ಅಲ್ಲಿಗಲ್ಲಿಗೆ ತಡೆದುಯೋಚಿಸುತ,
ಹೋಗಿ ಗೆಳೆಯರನು ಹಿಡಿದಲುಗಿಸಲವರು ಸ್ತಬ್ಧ
ರಾಗಿ, ಬೊಂಬೆಗಳಾದರೇನೆನಲಿ ತಿಲಕವಾಕ್‌ಶಕ್ತಿಸಾಮಾನ್ಯವೇನು? ॥ ೩೨ ॥

ಅಲ್ಲಿಂದ ಗುರುಶಿಷ್ಯವೃಂದದೊಡಗೂಡುತ್ತ
ಎಲ್ಲರೂ ಹಿಂದಿರುಗಿ ಬಂದು ಮರುದಿನ ಸಾಲೆ
ಯಲ್ಲಿ ಸೇರಿದರು, ಹಿಂದಿನ ಭಾಷಣವನೆ ಮನದಲ್ಲಿ ನೆನೆಯುತ್ತಿದ್ದರು. ॥
ಇಲ್ಲಸರಿ ಇವನ ಭಾಷಣಕೆಂದು ಕೆಲಕೆಲರು,
ಚೆಲ್ವಾಯಿತೆಂದು ಹಲವರು, ಸೂತ್ರರೂಪವೇ
ನೊಳ್ಳಿತಾಗಿದೆ! ಎಂದು ಬೇರೆಯವರೊಂದೊಂದು ವಿಧವಿಮರ್ಶಿಸುತಿದ್ದರು. ॥ ೩೩ ॥

ಇಂಗ್ರಜಿಯು ಕಲಿತಿದ್ದನಾದರೇನೈ ಬಾಲ
ಗಂಗಾಧರನು ತನ್ನ ದೇಶಮರ್ಯಾದೆಯನು
ಹಿಂಗಿಸಿದನೇ? ದೇಶಭಕ್ತಗೆ ಪರಾನುಕರಣವು ಮನಸ್ಸಿಗೆ ಹಿಡಿವುದೆ? ||
ಸಾಂಗವಾಗಿಯೆ ವಿಶ್ವವಿದ್ಯಾಲಯದಲಿ ವ್ಯಾ
ಸಂಗಮಾಡಿದನು ಕೆಲಕಾಲ, ಆದರಲ್ಲಿ ಪಾ
ರಂಗತೆಯ ಹೊಂದಿದನು, ಬೀ. ಎ, ಎಲ್ಲೆಲ್ಲಬೀಯಾ ಪದವಿಯನು ಪಡೆದನು. || ೩೪ ||

ವಿದ್ಯಾರ್ಥಿಯಾಗಿರುವ ಕಾಲದಲಿ ಸಾಲೆಯಲಿ
ಇದ್ದಗೆಳೆಯರಲೆಲ್ಲರಲಿ ಸ್ವದೇಶೋನ್ನತಿಯ
ಸುದ್ದಿಯನೆ ಚರ್ಚಿಸುತ, ಅದರ ವಿಷಯದಲತಿ ವಿಚಾರವನು ಮಾಡಿದ್ದನು. ||
ಆದ್ದರಿಂದಲೆ ಬಾಲಗಂಗಾಧರನು ವಿಶ್ವ
ವಿದ್ಯಾಲಯದಲಿ ತೇರ್ಗಡೆಯಾದ ಮರುದಿನವೆ
ಬದ್ಧಕಂಕಣನಾಗಿ ದೇಶಸೇವಾವ್ರತವ ಶ್ರದ್ಧೆಯಲಿ ಕೈಕೊಂಡನು. || ೩೫ ||

ಭಾರತದ ಗೃಹಕೃತ್ಯವನ್ನು ನಡೆಯಿಸಲೆಂದು
ಭಾರತಿಯನೇ ಮೊದಲು ವರಿಸಿದನು, ಮತ್ತೂ ವಿ
ಚಾರಮಾಡುತ ಕರ್ಮಯೋಗದೊಳಗಣ ಸತ್ಯತತ್ವವನು ತಿಳಿಸಲಾಗಿ; ||
ಬೇರೆಯವರಂತೆಯೇ "ಸತ್ಯಭಾಮಾ" ಎಂಬ
ನಾರಿಯನು ಮದುವೆಯಾಗುತಲವಳ ಮೇಲೆ ಗೃಹ
ಭಾರವನು ವಹಿಸುತಾ ಪರತತ್ವವನ್ನೆ ಮನದಲ್ಲಿ ನೆನೆಯುತ್ತಿದ್ದನು. || ೩೬ ||

ಮೂರನೆ ಸಂಧಿ ಸಂಪೂರ್ಣ.

**ಸಂಧಿ ಮೂರಕ್ಕೆ ಪದ್ಯ ೮೪**

---

# ನಾಲ್ಕನೆ ಸಂಧಿ.

---

**ಸೂಚನೆ:**

ನೂತನದ ವಿದ್ಯಾಲಯವನಲ್ಲಿ ನಿರ್ಮಿಸುತ,
ಮಾತೃದೇಶಕ್ಕಾಗಿ ಕಷ್ಟವನು ಸಹಿಸುತ್ತ,
ಭೀತಿಯಿಲ್ಲದೆ ಕೇಸರೀಮರಾಠಾ ಪತ್ರಗಳ ಪ್ರಕಾಶಕನಾದನು. ||

ಅರುಹುವೆನು ಮುಂದಿನ ಕಥಾವಿಸ್ತರವನು, ಭೂ
ಸುರ ವಿಷ್ಣುಶಾಸ್ತ್ರಿ ಚಿಪಳೂಣಕರನೆಂಬವನು
ಸರಕಾರಿಯುದ್ಯೋಗವನು ತಿರಸ್ಕರಿಸುತಲಿ ಪುಣ್ಯಪಟ್ಟಣಕೆ ಬಂದು; ||

ಸರಿಯಾದ ದೇಶಭಕ್ತರ ಸಿದ್ಧಗೊಳಿಸಲಿಕೆ
ಇರುವ ನಿಜವಾಗಿರುವ ಸಾಲೆಯೊಂದನು ಇಲ್ಲಿ
ತೆರೆಯಬೇಕೆಂದಿದ್ದನಾದರೇನೊಂದಕ್ಕಿಯಿಂದಲೊಂದಡಿಗೆಯಹುದೆ? ॥ ೧ ॥

ಹೀಗೆ ಯೋಚಿಸುತಿರಲು ಬಂದರಲ್ಲಿಗೆ ತಿಲಕ,
ಆಗರಕರನು, ಕರಂದೀಕರನು, ಬಾಳಾಜಿ,
ಭಾಗವತ ಮೊದಲಾದವರು ತಮ್ಮ ಪೂರ್ವಸಂಕಲ್ಪವನು ಧ್ಯಾನಿಸುತ್ತ. ॥
ಆಗ ನಿಶ್ಚೈಸಿದರು ಮರುವರುಷವೇ ಸಾಲೆ
ಯಾಗಬೇಕೆಂದು, ಅದರಂತೆಯೇ ಸಾವಿರದ
ಮೇಗೆಂಟುನೂರ ಎಂಬತ್ತೆಂಟನೆಯ ಇಸವಿಯಲ್ಲಿ ನಿರ್ಮಾಣವಾಯ್ತು. ॥ ೨ ॥

ಎಲ್ಲರೂ ವಿಖ್ಯಾತರಾದ ಪಂಡಿತರಿದ್ದ
ರಲ್ಲಿ ಶಿಕ್ಷಕರಾಗಿ, ಹೇಳಲೇನದನು! ಮು
ತ್ತಲ್ಲಿ ಆಪಟೆ ಎಂಬ ದೊಡ್ಡ ವಿದ್ವಾಂಸನೊಬ್ಬನು ಬಂದು ಸೇರಿ ಬಳಿಕ; ॥
ಎಲ್ಲ ಮೇಲುವಿಚಾರಗಳನು ಸ್ವೀಕರಿಸಿದನು,
ಇಲ್ಲಸರಿ ಈ ಸಾಲೆಗೆಂದೆನುತಮಾಡಿದನು,
ಎಲ್ಲೆಲ್ಲಿಯೂ ಕೀರ್ತಿ ಹಬ್ಬಿದುದು ಫರ್ಗ್ಯುಸನ ಕಾಲೇಜು ಎಂದೆನುತಲಿ. ॥ ೩ ॥

ಹೇಳಲೇನದರ ವೈಭವವನೆಲ್ಲೆಲ್ಲಿಂದ
ಬಾಲಕರು ಬರುತ್ತಿದ್ದರತಿಕುತೂಹಲದಿಂದ,
ಸಾಲುಸಾಲಾಗಿ ಸಂದಣಿಗೊಂಡು ಸಕಲರೂ ಸೇರಿದರು ಆತುರದಲಿ. ॥
ಮೇಲುಗಡೆಯಿಂದೆಳ್ಳನೊಂದಹಾಕಲು ಕೆಳಗೆ
ಬೀಳದಂತಾಯಿತಿದು, ಲೋಕದಲಿ ಮಾದರಿಯ
ಸಾಲೆಯಾಯಿತು, ಸರಸ್ವತಿಯ ಸಂಚಾರದ ವಿಹಾರೋಪವನವಾಯಿತು. ॥ ೪ ॥

ಸಾಲೆಯಲಿ ಸೇರಿದುದೆ ಗೊತ್ತು, ಮರುದಿನವೆ ಆ
ಬಾಲರೆಲ್ಲರು ದೇಶಭಕ್ತರಾದರು, ಮುಂದಿ
ನಾಲೋಚನೆಯೆ ದೇಶದೇಶವೆಂದಲ್ಲದಿನ್ನೊಂದಿಲ್ಲವೆಲ್ಲವರಲಿ. ॥
ಕಾಲಬಂತಜ್ಞಾನವೆಂಬಕತ್ತಲೆಗುದಯ
ಕಾಲವಾಯಿತು ಭರತಖಂಡಕೆ, ಸ್ವರಾಜ್ಯಕ್ಕೆ
ಮೇಲುಹಂತಿಯಿದೆಂಬತೆರದಿಂದ ಎಲ್ಲಕಡೆಯಲ್ಲಿ "ವಂದೇ ಮಾತರಂ" ॥ ೫ ॥

ಹೊಟ್ಟೆಬಟ್ಟೆಯ ಪಾಡಿಗಾಗಿ ಶಿಕ್ಷಕತನವ
ಕಟ್ಟಿಕೊಳ್ಳುತಲಿ ಏನೇನಾದರೂ ಬಾಯಿ
ಬಿಟ್ಟು, ತಿಂಗಳಿನಂತ್ಯದಲ್ಲಿ ರೂಪಾಯಿಗಳ ಕಟ್ಟಿಕೊಂಡೊಯ್ಯುವವನು, ॥

ಸೃಷ್ಟಿಯಲುಪಾಧ್ಯಾಯನೆಂಬ ಹೆಸರಿಗೆ ಮಸಿಯ
ಬೊಟ್ಟು ಹಾಕದೆ ಸುಮ್ಮನಿರನು; ಅಂಥವರಿಂದ
ಕೆಟ್ಟು ಹೋಗಿದೆ ಭರತಖಂಡ; ಅಭಿವೃದ್ಧಿ ಅದು ಹುಟ್ಟತಿಲ್ಲಿಂದತಿರುಗಿ. ॥ ೭ ॥

ಅದು ಕೇಳುವುದು ಸ್ವರಾಜ್ಯಸಮುದ್ರಘೋಷ, ಮ
ತ್ತದು ಕಾಣುವುದು ಸ್ವರಾಜ್ಯಸಮುದ್ರಕಲ್ಲೋಲ,
ಅದು ತೋರುವುದು ಸ್ವರಾಜ್ಯಸಮುದ್ರವನು ಮಥಿಸಲಿರಿಸಿರುವ ಮಂದರಾದ್ರಿ. ॥
ಇದಕೆ ಸಂಶಯವಿಲ್ಲವೆಂಬಂತೆ ಬಾಲಕರ
ವಿಧವಿಧದ ಬೊಬ್ಬೆಯುಬ್ಬರವನೊಳಕೊಂಡಿರುವ
ಅಧಿಕೋನ್ನತಿಯನಾಂತ ಫರ್ಗ್ಯುಸನು ಕಾಲೇಜು ಅದು ಮೆರೆವುದೇನೆನುವೆನು! ॥ ೭ ॥

ಘೋರವೆಂಬುದು ನೋಡಿದರೆ ಲೋಕದಲ್ಲಿ ಸಂ
ಸಾರಸಾಗರವಾಗಿರುವುದದಕ್ಕಿಳಿದವನು
ಪಾರಾಗುವುದು ಕಷ್ಟಸಾಧ್ಯ; ಅದರಂತೆಯೇ ಈ ಸಮಯದಲ್ಲಿ ನಮ್ಮ; ॥
ಭೂರಿವಿದ್ವಾಂಸನಾಗಿದ್ದಾ ಪಟೆಯು ಮನೆಯ
ಭಾರವನು ನಿರ್ವಹಿಸಲೆಂದುಳಿದ ಸಮಯದಲಿ
ಬೇರೊಂದು ವೃತ್ತಿಯನು **ಕೈಕೊಳ್ಳುತಾ**ವಿಧದಿ ಹಣವ ದುಡಿಯುತ್ತಿದ್ದನು. ॥ ೮ ॥

ಜನತೆಯಲಿ ಜಾಗ್ರತೆಯನುಂಟುಮಾಡಲಿಕೆಂದು
ಘನವಾದ ಕೇಸರಿ ಮರಾಠ ಪತ್ರಿಕೆಗಳನು
ಜನರು ಮೆಚ್ಚುವತೆರದಿ ಹೊರಡಿಸಿದನಂದಾ ಸರಸ್ವತೀಧ್ವಜತಿಲಕನು. ॥
ಅನುದಿನದ ರಾಜಕೀಯಾದಿ ಸಂಗತಿಗಳನು
ಜನಜನಿತ ಮಾಡಿದನು, ಸಾಮಾನ್ಯರಿಗೆ ಕೂಡ
ಮನವರಿಕೆಯಾಯ್ತು 'ನಾವಾರೇನು ನಮ್ಮ ಹಕ್ಕುಗಳೆಂಬ ಸಂಗತಿಗಳು'. ॥ ೯ ॥

ಎಲ್ಲಿನೋಡಲು ರಾಜಕೀಯ ಚಳವಳಿಯ ಈ
ಗುಲ್ಲು ಹೊರತೇನಾದರುಂಟೆ? ಆ ಸಮಯದಲಿ
ಕೊಲ್ಲಾಪುರದ ವಿಷಯವಾಗಿ ಕಡುತರದ ಟೀಕೆಯ ಮಾಡಿ ಬರೆಯಲದಕೆ, ॥
ಹೊಲ್ಲದುದ ಬರೆದರಿದು ಆಕ್ಷೇಪಕರವೆಂದು,
ಇಲ್ಲದ ನೆವವನೊಡ್ಡಿ, ತಿಲಕ ಆಗರಕರರಿ
ಗಲ್ಲಿನಧಿಕಾರಿಗಳು ನೂರೊಂದುದಿನದ ಬಂದೀವಾಸವನುಗೈದರು. ॥ ೧೦ ॥

ಆಗಲಾ ಚಿಪಳೂಣಕರ ಶಾಸ್ತ್ರಿಗಳು ಸ್ವರ್ಗ
ಭೋಗವನ್ನನುಭವಿಸಲೆಂದು ಹೋದರು, ಇತ್ತ
ಲಾಗಿ ಶ್ರೀ ತಿಲಕ, ಆಗರಕರರು ಬಂದಿವಾಸಕೆ ಹೆದರಿನಿಂತರೇನು? ॥

ಸಾಗಿ ಹೋಯಿತು ಶಿಕ್ಷೆಯವಧಿ, ಹೊರಟಲ್ಲಿಂದ
ಬೇಗನೈತಂದು, ಮೊದಲಿಂದ ಇಮ್ಮಡಿಯು ಉ
ದ್ವೇಗವನು ಲೇಖನದ ಭಾಷಣದ ಮುಖದಿಂದ ಅಲ್ಲಲ್ಲಿ ಪ್ರಕಟಿಸಿದರು. ॥ ೧೧ ॥
ದೇಶಕಾರ್ಯಕ್ಕಾಗಿ ಇವರಿಬ್ಬರೂ ಬಂದಿ
ವಾಸವನು ಕೈಕೊಂಡರೆಂದರಿತು ಸರ್ವರೂ
ತೋಷದಿಂದವರ ಪ್ರತಿಯೊಂದು ಕೆಲಸಕ್ಕೂ ಸಹಾಯಮಾಡುತ್ತಿದ್ದರು. ॥
ಆ ಸಮಯದಲ್ಲಿ ಶ್ರೀಯುತರ ಬಲದಿಂದ ವಿ
ದ್ಯಾಸಂಸ್ಥೆಯೊಂದು ಮೂಡಿತು, ಭಾರತಕ್ಕಿದುವೆ
ಭೂಷಣಪ್ರಾಯವಾಗಿಹ ದಾಕ್ಷಿಣಾತ್ಯ ವಿದ್ಯಾವರ್ಧಕದ ಸಂಘವು. ॥ ೧೨ ॥
ಊರೆಲ್ಲ ಹಬ್ಬಿಹೋಯಿತು ಕೀರ್ತಿ, ಕಾವ್ಯವಿ
ಸ್ತರಭಯದಿಂದ ಇಲ್ಲಿಯೆ ವಿರಮಿಸುವೆನಿದನು,
ಕಾರಣಾಂತರದಿಂದ ಮತಭೇದವುಂಟಾಗಿ ತಿಲಕನಾ ಸಂಸ್ಥೆಯಿಂದ ॥
ಜಾರಿದನು; ಕೇಸರಿ ಮರಾಠ ಪತ್ರಿಕೆಗಳಾ
ದ್ವಾರದಿಂದಲಿ ಲೋಕಸೇವೆಯನು ಮಾಡಲು, ಸು
ಧಾರಕವೆನುವ ಪತ್ರಿಕೆಯನು ಪ್ರತ್ಯೇಕವಾಗರಕರನು ಹೊರಡಿಸಿದನು. ॥ ೧೩ ॥
ಒಂದು ಕಡೆಯಿಂದ ಪ್ರಾಚೀನಪದ್ಧತಿಯು, ಇ
ನ್ನೊಂದು ಕಡೆಯಿಂದಲಿ ನವೀನಪದ್ಧತಿಯು, ಈ
ದ್ವಂದ್ವಯುದ್ಧವ ನೋಡಿ, ಓದಿ ಪಠಿಸುತ್ತಲಿ ಮಹಾರಾಷ್ಟ್ರ ದೇಶದಲ್ಲಿ, ॥
ಅಂದಿನಿಂದಲಿ ವಾಚನಾಭಿರುಚಿ ಹುಟ್ಟಿದುದು,
ಇಂದು ಕೇಸರಿಯುಗ್ರಲೇಖವೇನೈ? ಇನ್ನು
ಮುಂದಿನ ಸುಧಾರಕದಲೇನು ಬರಬಹದು? ಹೀಗೆಂದಾತುರದಲಿದ್ದರು. ॥ ೧೪ ॥
ಇಷ್ಟವೆಂದೆನಲು ಮಾನವರಂತರಂಗಗಳ
ಒಟ್ಟುಗೂಡುವ ಗುಣವು, ಅದುವೆ ತತ್ವಪ್ರೇಮ,
ಸೃಷ್ಟಿಯಲ್ಲದುವೆ ನಿಜವಾದ ಗೆಳೆತನ; ಅದಕುದಾಹರಣೆಯೊಂದಿರುವುದು. ॥
ಗುಟ್ಟನಲಿ ಕೇಳಿದರೆ ತಿಲಕನಾಗರಕರನ
ಶ್ರೇಷ್ಠನೆನ್ನುವನು; ಆಗರಕರನು ತಿಲಕನನೆ
ಬೆಟ್ಟು ತೋರಿಸಿ ಹೊಗಳುವನು, ಗುಣಗ್ರಾಹಿಗಳಿಗುಂಟೆ ವ್ಯಕ್ತಿದ್ವೇಷವು? ॥ ೧೫ ॥
ಮತಭೇದವಿರಲು ವ್ಯಕ್ತಿದ್ವೇಷವನು ತೋರಿ
ಸುತಲವನ ಪ್ರತಿಯೊಂದು ಕೆಲಸದಲಿ ದೋಷವನೆ
ಅತಿಪ್ರಯತ್ನದಿ ಹುಡುಕಿತೆಗೆದು ತೋರಿಸುವಾತನೇ ಮಾನವಶ್ವಾನನು. ॥

ಇತರರಿವರಂತೆಯೇ ನಡೆದುಕೊಂಡರೆ ಲೋಕ
ಹಿತವಾಗಿ, ಕಣ್ಮುಚ್ಚಿ ತೆರೆಯುವುದರೊಳಗೆ ಭಾ
ರತವು ಭಾರತಕಾಲದಂತೆ ಪೂರ್ವಸ್ಥಿತಿಯನನುಕರಿಸದಿರುವುದೇನು? ॥ ೧೬ ॥

ಪತ್ರಿಕಾವಿಷಯದಲಿ ಮತಭೇದದಿಂದ ಅನು
ನಿತ್ಯವೂ ಹೋರಾಡುತಿರುವ ಆಗರಕರನು
ಸ್ವಸ್ಥವಿಲ್ಲೆಂದರಿತು, ತಿಲಕನೈತರೆ ನೋಡಿ ಬಂದ ಸಂತೋಷವನ್ನು ॥
ವಿಸ್ತರಿಸಲರಿದು, ಆಗರಕರನು ಸುರಲೋಕ
ದತ್ತ ಸಾರಲು ಕೇಳಿ, ತಿಲಕನತಿಮನದಿ ಮರು
ಗುತ್ತಲಿದ್ದನು! ಇದುವೆ ಲೋಕದಲಿ ನಿಜವಾದ ಮಿತ್ರತ್ವವಾಗಿರುವುದು. ॥ ೧೭ ॥

ಆ ಸಮಯದಲ್ಲಿ ಸರಕಾರದವರಿಂದಲಿ ವಿ
ಶೇಷವಾದೊಂದು ಕಾನೂನು ಹೊರಟುದು, ಅದನು
ನಾಶ ಮಾಡುವ ಯತ್ನದಲಿ ರಾಮಬಾಣದಂತಿರುವ ಬಲುಲೇಖನಗಳು ॥
ಕೇಸರಿಯಲೇ ಪ್ರಕಟವಾಗಿ, ಆ ಪ್ಲೇಗಿನ ವಿ
ಲಾಸದಲಿ "ರೇಂಡು" ಸಾಹೇಬನೆಂಬವನನ್ನು
ಗಾಸಿಮಾಡಿದರಾರೊ ಬಾಲಕರು! ಅದರಲಿ ವಿಶೇಷ ಗೊಂದಲವೆದ್ದಿತು. ॥ ೧೮ ॥

ಶ್ರೀ ಗಣೇಶ ಶಿವಾಜಿಯುತ್ಸವಗಳೆಂದು ಹೊಸ
ದಾಗಿ ಆರಂಭಿಸುತ, ಆ ಸಮಯದಲ್ಲಿ ಉ
ದ್ವೇಗಪರವಾದ ಲೇಖನ ಭಾಷಣಗಳ ಬರೆಯುತ್ತಲೋದುತ್ತಲಿರಲು; ॥
ಆಗ ಜನರಕ್ಷಿಗಂಜನಹಾಕಿದಂತಾಗೆ,
ಬೇಗನೆಲ್ಲರು ಕಣ್ಣು ತೆರೆದು ದೇಶೋದ್ಧಾರ
ಕಾಗಿ ಯತ್ನವ ಮಾಡುವಂತೆ ಹುರಿದುಂಬಿಸಿದನಿಂತೀ ಪ್ರಕಾರದಿಂದ. ॥ ೧೯ ॥

ಖನಿಜ, ಉಬ್ಭಿಜ್ಜ, ಪ್ರಾಣಿಗಳೆಂದು ಮೂರಾಗಿ
ಗಣಿಸುತ ವಿಭಾಗಿಸಲು, ಖನಿಜವನ್ನುದ್ಭಿಜ್ಜ
ಉಣುವುದಾಯಿತು, ಮತ್ತೆ ಉದ್ಭಿಜ್ಜವೇ ಪ್ರಾಣಿಕೋಟಿಗಾಹಾರವಾಯ್ತು. ॥
ಮನುಜನೆಂಬವನೆ ಪ್ರಾಣಿಗಳಲ್ಲಿ ಶ್ರೇಷ್ಠನಾ
ದನು, ತಿಳಿವೆನುವ ಮಾರ್ಗದಲಿ ನಡೆಯುತಿರುವ ಈ
ಗುಣದಿಂದ; ಅವನಕ್ಕೆಕೆಳಗೆ ಲೋಕವೆ ತಲೆಯ ತಗ್ಗಿಸುತ ನಡೆಯುತಿಹುದು. ॥ ೨೦ ॥

ತಾನು ತನ್ನಯ ಬಂಧುಬಳಗ ತನ್ನಯ ಜನರು,
ತಾನು ಹುಟ್ಟಿದ ಊರು, ತಾನುತಾನೆಂಬ ಅಭಿ
ಮಾನವೆಂಬುದು ಮಾನವಸ್ವಭಾವದಿ ಮೊದಲನೆಯ ಮೆಟ್ಟಲಾಗಿಹುದು. ॥

ತಾನು ಹುಟ್ಟಿದಊರ ಪಶುವಾದರೂ ಬಿಡದು,
ಪ್ರಾಣಿಕೋಟಿಗಳೆಲ್ಲವದನೆ ಪ್ರೀತಿಸುತಿಹವು,
ಮಾನವನದನು ಮರೆಯೆ ಕಲ್ಮರಕೆ ಸರಿಯಾದನೆಂಬುದನು ಹೇಳಬೇಕೆ? ॥ ೨೧ ॥

ಬೇರೆದೇಶದವರನು ನೋಡಲವರಿಗು ನಮಗು
ತೋರುವುದು ಅಜಗಜಾಂತರಭೇದವಾಗಿ, ಇದ
ದೂರಮಾಡಲುಪಾಯವೇನು? ವಿದ್ಯೆಯುಲವರ ಸರಿಮಿಗಿಲುನಾವಿರುವೆವು. ॥
ಸಾರುವುದುದೇಶಕಲ್ಲಲ್ಲಿ, ಅವರವರಕೈ
ಗಾರಿಕೆಯನಭಿವೃದ್ಧಿಸಲುಬೇಕು, ಇದರಿಂದ
ಸೇರುವುದು ಸಂಪದಭಿವೃದ್ಧಿ. ಅದರಿಂದ ಮುಂದಹುದು ಸರ್ವಾರ್ಥಸಿದ್ಧಿ. ॥ ೨೨ ॥

ಎತ್ತುಗಾಣವನೆಳೆವ ತೆರದಿಂದ ನಿಷ್ಕಾಮ
ಕೃತ್ಯಗೈಯುಲುನಾವು, ಪರಿಪರಿಯರೂಪದಲಿ
ತೆತ್ತುಹಣವನು ರಾಜಭಕ್ತಿಯಲಿ ನಡೆವವರು ನಾವು, ಭಾರತಮಾತೆಯ ॥
ಪುತ್ರರೂನಾವು, ಆಂಗ್ಲೋಇಂಡಿಯನರೆನಲು
ಅತ್ತಣಿಂದಲಿಬಂದ ವ್ಯಾಪಾರಿಜನರವರು,
ಇತ್ತನಮ್ಮಯುಮನೆಯುಲಂಗಡಿಯುತೆರೆದಿಹರು, ಚೀಲವನು ತುಂಬಿಸುವರು. ॥ ೨೩ ॥

ಊರನುಡಿಗೊತ್ತಿಲ್ಲ, ರೀತಿಗೊತ್ತಿಲ್ಲ, ಗಂ
ಭೀರತೆಯಿದೆಂದು ನಮ್ಮೂರಲ್ಲಿಯೂ ಅವರು
ದೂರದಲೆ ಇಹರಾದರೂ ಮೂಗುಬಳ್ಳಿಹಿಡಿದತ್ತಲಿತ್ತಲು ಒಯ್ವರು. ॥
ಈರೀತಿನ್ಯಾಯವೇ, ಮರ್ಯಾದೆಯೇ ನಮಗೆ?
ಸೇರುತೊಗ್ಗಟ್ಟಾಗಿ ನಮ್ಮ ಹಕ್ಕನು ನಾವು
ಕೋರಿಕೈಕೊಂಡು, ಪಶುತನವನ್ನು ತೊರೆದು ಪೂರ್ವದ ಪೌರುಷವಗಳಿಸುವ. ॥ ೨೪ ॥

ಹಿಂದುಮುಂದನುನೋಡದೀಗ ನಮ್ಮವರೆಲ್ಲ
ಒಂದೇಪ್ರಕಾರ ತಿಳಿವಿನಕಣ್ಣು ತೆರೆದು, ತ
ನ್ನಿಂದ ಕೂಡಿದ ದೇಶಸೇವೆಮಾಡುವುದು, ತನುಮನಧನವನರ್ಪಿಸುವುದು; ॥
ಮುಂದಾಳುಗಳುಹೋದ ದಾರಿಹಿಡಿವುದು, ಅವರು
ಎಂದುದನು ಮಾಡುವುದು, ಸಾಧ್ಯವಿರದಿರಲು, ಸೈ
ಎಂದಾದರೂ ಹೇಳುವುದು, ಕಡೆಗೆ ಬೆಕ್ಕಿನಂತಡ್ಡಬಾರದೆ ಇರುವುದು. ॥ ೨೫ ॥

ಕೆಲವರಿಗೆ ಹಣವೆ ಕುಲದೈವವಾಗಿರುತಿಹುದು,
ಕೆಲವರಿಗೆ ಹೊಗಳಿಕೆ ಪರಬ್ರಹ್ಮವಾಗಿಹುದು,
ಕೆಲವರಿಗೆ ದೇಶಾಭಿವೃದ್ಧಿಯೇ ಸರ್ವಸ್ವ; ಈಮೂರು ಸ್ವಾರ್ಥಗಳಲಿ; ॥

ನೆಲದೇಳಿಗೆಯನಾರು ಬಯಸುವನು; ಆತನೇ
ತಿಲಕನಲ್ಲವೆ ಭಾರತೀಯರಲಿ? ನೆಲೆಗೊಂಡು
ನಿಲುವನು ಯಶಶ್ಶರೀರವ ಪಡೆದು ಚಂದ್ರಾರ್ಕರಿರುವ ವರೆಗೀಲೋಕದಿ. ॥ ೨೬ ॥

ಮಂತ್ರಯುಗವೆಂಬುದದು ಕಳೆದು ಹೋಯಿತು; ಬಂತು
ಯಂತ್ರಯುಗವೀಗ, ಈ ಸಮಯದಲಿ ನಮಗೆಲ್ಲ
ತಂತ್ರವೇಬಲವು, ಇನ್ನಿದಕೆಸರಿಬೇರಿಲ್ಲ, ಇದುರಾಜಕಾರಣದಲಿ; ॥
ನಿಂತಿರುವುದದರಿಂದ ಹಳೆಕಟ್ಟುಗಳ ಬಿಟ್ಟು,
ಎಂತೆಂತು ಮಾಡಬೇಕಂತಂತೆ ಮಾಡಿದರೆ,
ಸಂತಸವಹುದು ಸ್ವರಾಜ್ಯವು ಬಹುದು; ಕಾಲಬಂದಂತೆ ಕೋಲವಕಟ್ಟಲು. ॥ ೨೭ ॥

ಆರಾರು ಏನೇನು ಹೇಳಿದರು ನಾವದರ
ಏರುಪೇರುಗಳ ಚೆನ್ನಾಗಿ ತಿಳಿಯುತಲಿ, ಇದು
ಸಾರವಿದುಸಾರವಲ್ಲೆಂಬುದನು ಮನಮುಟ್ಟುವಂತೆ ಸಂಶೋಧಿಸುತಲಿ; ॥
ಬೇರೆಯವರಿಗು ನಮಗು ಸಂಬಂಧವೆಷ್ಟಿಹುದು?
ಊರವರ ಸಂಬಂಧವೆಷ್ಟಿಹುದು? ಎಂಬುದ ವಿ
ಚಾರಮಾಡದೆ, ಕಂಡಕಂಡವರ ನುಡಿಗೆ ಕಿವಿಗೊಡಲು ಕಡುಮೂರ್ಖರಹೆವು. ॥ ೨೮ ॥

ಅನ್ನವಿಲ್ಲದೆ ಬಳಲುವವರೆಷ್ಟು ಮಂದಿ! ತ
ಮ್ಮನ್ನು ತಾವೇ ತಿಳಿಯದವರೆಷ್ಟು ಮಂದಿ! ಈ
ಬನ್ನವನೆ ಭಾಗ್ಯವೆನ್ನುವರೆಷ್ಟು ಮಂದಿ! ಅಕಟಾ! ತಿಳಿಯದಜ್ಞಾನದಿ, ॥
ಖಿನ್ನರಾಗಿಹರೆಷ್ಟು ಮಂದಿ! ಇದ ನೋಡಿದರೆ
ಕಣ್ಣೀರು ದರದರನೆ ಕಾಲಾಗಿ ಸುರಿವುದೇ
ನೆನ್ನುವುದು, ಇದು ನಮ್ಮ ಭಾರತದ ಪ್ರಾರಬ್ಧವೆನ್ನಬೇಕಲ್ಲವೇನು? ॥ ೨೯ ॥

ಹಿಂದಿದ್ದ ವೈಭವಗಳೆಲ್ಲವ ಮನಸ್ಸಿನಲಿ
ತಂದುಚಿಂತಿಸಿ, ನಮಗೆ ಬಂದದುರ್ದಶೆಗಿದಕೆ
ಮುಂದೆ ಮಾಡುವುದಾವ ಪರಿಹಾರವೆಂದು ಮನನೊಂದು ಕಣ್ಣೀರಿಡುತಲಿ; ॥
ಸಂದವಿಕ್ರಮಶಾಲಿವಾಹನಾದ್ಯರಿಗೆಲ್ಲ
ಎಂದಮರಪದವಾಯಿತಂದು ಮೊದಲಾಗಿ, ಈ
ದಂದುಗವು ಬಂದಿರುವುದೆನುತಲೊಳಗೊಳಗೆ ಬೆದಬೆಂದು ಕಣ್ಣೀರಿಡುತಲಿ. ॥ ೩೦ ॥

ವರಮುನಿ ವಸಿಷ್ಠ ವೇದವ್ಯಾಸನಾಂಗಿರಸ
ಸುರಮುನಿಪ ಚಾಣಕ್ಯ ಮೊದಲಾದ ಬುಧರಿಂದ
ವಿರಚಿಸಲ್ಪಟ್ಟ ಹೋಮದ ಸುಗಂಧದ ಧೂಪದಿಂದ ಪರಿಶುದ್ಧವಾದ; ॥

ಧರೆಯನೇಕಚ್ಛತ್ರದಿಂದ ಪಾಲಿಸಿ, ನಾಲ್ಕು
ತೆರದ ವರ್ಣಗಳನಾಯಾ ರೀತಿಯಲಿ ಹೊರೆದ
ನರಪಾಲರಾಮ, ಧರ್ಮಜ, ವಿಕ್ರಮಾದಿತ್ಯ, ಶಾಲಿವಾಹನರಹೆತ್ತ; ॥ ೩೧ ॥
ನೌಕೆಯಲಿ ಜಲಯಾನವನು ಮಾಡಿ, ಹುಟ್ಟೂರ
ಸೌಕರ್ಯಕಾಯಾತನಿರ್ಗತಗಳೆನ್ನುವ ಅ
ನೇಕ ವ್ಯಾಪಾರಗಳ ಮಾಡುವಾ ವೈಶ್ಯವೃಂದಕೆ ಅಬ್ಬೆಯೆಂದೆನಿಸಿದ; ॥
ಬೇಕಾದ ಹೊಲಗದ್ದೆಗಳನುತ್ತು ಬಿತ್ತುತ, ಅ
ನೇಕವಿಧ ಫಲಗಳನ್ನೊದಗಿಸುವ ಶೂದ್ರರ ಅ
ನೀಕವನು ಹೆತ್ತುಸಂತಸವಿದ್ದ ಭಾರತವೆ! ನಿನಗೆ ಹೀಗಾಯಿತಕಟಾ! ॥ ೩೨ ॥
ಎಂದು ನಾನಾರೀತಿಯಿಂದ ಉದ್ಗಾರಗಳ
ತಂದು ಬೋಧಿಸುತಿರಲು, ಹಲವರಾವಿಷಯಕ್ಕೆ
ತಂದು ಸಾಹಾಯ್ಯಮಾಡಿದರು, ಅದರಿಂದ **ರಾಷ್ಟ್ರೀಯ**ಸಭೆಯುದಿಸಿತಾಗ; ॥
"ಹಿಂದೀ ಸ್ವರಾಜ್ಯ"ವೆಂಬುವ ಧ್ಯೇಯವದು ಕಣ್ಣ
ಮುಂದೆನಿಂದುದು; ಒಡನೆ ಶಾಂತೋಗ್ರಪಕ್ಷಗಳು
ಬಂದುವಾಸೂರ್ಯೋದಯದಿ ಬೆಳಕು ಉಷ್ಣದಲಿ ಮಿಶ್ರವಾಗಿರುವಂದದಿ. ॥ ೩೩ ॥
ಸಂತಾನವಾಯ್ತು ಭಾರತಮಾತೆಗಾದರೂ
ಸಂತೋಷವಿಲ್ಲವೀ ಬಾಲಚೇಷ್ಟೆಯ ರೋಗ
ಕೆಂತೆಂತು ಮದ್ದುಮಾಯವು, ಮಂತ್ರತಂತ್ರಗಳು ನಡೆಯದಾದುವು ಕಡೆಯಲಿ! ॥
ನಿಂತು ದೃಢಮೂಲವಾದರೆ ಅದುವೆ ಗ್ರಹತೋರು
ವಂತೆಕಾಣಿಸಿ, ಅಪಸ್ಮಾರವಾಗುವುದೆಂದು
ಅಂತರಂಗದಿ ರಾಜಕೀಯವೈದ್ಯರು ಆಡತೊಡಗಿದರು ತಂತಮ್ಮಲಿ. ॥ ೩೪ ॥
ಮುಂಬಾಪುರದಿ ಹುಟ್ಟಿ ಬಳೆದು, ಯೌವನವು ನೆರೆ
ತುಂಬುತಿಪ್ಪತ್ತೆರಡು ವರುಷವಾಗಲು, ಸುರತ
ವೆಂಬ ಪಟ್ಟಣದಿ ಕೂಡಿದುದಲ್ಲಿ ಶಾಂತೋಗ್ರಪಕ್ಷಗಳ ಒರಸಾಟದಿ ॥
ಬಿಂಬಿಸಿದುದನ್ಯೋನ್ಯರಲಿ ಮನಃಕ್ಲೇಷಗಳು,
ಲಂಬಿಸಿದುದವರ ಹೊಟ್ಟೆಯಕಿಚ್ಚು ಲೋಕವನು,
ಕುಂಭಿನಿಗೆ ಉಸಿರುಕಟ್ಟಿತು, ಹೇಳಲೇನದನು ಬೊಂಬಾಟವಾಯಿತಲ್ಲಿ. ॥ ೩೫ ॥
ಇನ್ನಾದರೂ ನಮಗೆ ಸದ್ಭಾವ ಸದ್ಬಲವು,
ಪನ್ನತಿಕೆ ಪೌರುಷವು, ಬರಲಿಲ್ಲವದರಿಂದ
ಮಾನ್ಯವಾದೀ ಸ್ವರಾಜ್ಯದ ಗುರಿಯ ಮುಂದಿಟ್ಟು ಕೆಲಸವನು ಮಾಡಬೇಕು; ॥

ಎನ್ನುವುದು ಶಾಂತಪಕ್ಷವು, ಉಗ್ರಪಕ್ಷವದು
ಉನ್ನತಿಕೆ ಪನ್ನತಿಕೆ, ಪೌರುಷವು ಸದ್ಭಾವ
ಸನ್ನದ್ಧವಾಗಿದೆ ಸ್ವರಾಜ್ಯವೀಗಲೆ ನಮಗೆ ಸಿಕ್ಕಬೇಕೆಂದೆಂಬುದು. .. ॥ ೩೬ ॥
ಈಗ ಮತ್ತೆಂಬುದಿಷ್ಟೇ ಭೇದವಿವರೊಳಗೆ
ತಾಗಿ ಬಂಧುದು, ಕಡೆಗೆ ತಂತಮ್ಮ ಮಾತುಗಳು
ಹೇಗಾದರೂ ಮಾನ್ಯವಾಗಬೇಕೆಂದು ಹಟಹಿಡಿದರಲ್ಲಿಂದ ಮತ್ತೆ. ॥
ಆಗಾಗ ಅಲ್ಲಿಗಲ್ಲಿಗೆ ಬಂದು ಕಡೆಕುಡಿಗೆ
ತಾಗಿಸುತ ಬೆಂಕಿಯನು ನೋಡುತಿದ್ದರು ಕೆಲರು,
ಭಾಗವಾಯ್ತಲ್ಲಿ ರಾಷ್ಟ್ರೀಯಸಭೆ ಸುರತದಲಿ, ಬಳೆಯಿತು ಗೃಹಚ್ಛಿದ್ರವು. ॥ ೩೭ ॥
ಮರಳಲ್ಲಿ ಬರೆದು ಮಡಿಲಲಿ ಕಟ್ಟದಂತಾಯ್ತು,
ಸುರೆಯನ್ನು ತಂದು ಗರಳದಿ ಬೆರಸಿದಂತಾಯ್ತು,
ಒರೆಯಲೇನೆಲ್ಲ ಬಣ್ಣಗಳನ್ನು ಒಮ್ಮೆಯೇ ಮಸಿ ನುಂಗಿದಂತೆ ಆಯ್ತು. ॥
ಸರಿದರವರಲಿ ಕೆಲರು ರಾಜಕೈದಿಗಳಾಗಿ,
ಉರಿಕಾಡ ಸುಡುವಲ್ಲಿ ಹಸಿಯೊಣಗಿಲೆಂದುಂಟೆ?
ಮರಿಯಾದೆಗೊಡಕಿಲ್ಲವೆಂದು ದೇಶಕ್ಕಾಗಿ ಬಂದಿಯಾದರು ಹಲವರು. ॥ ೩೮ ॥
ಮುಳುಗಿ ಮಿಂದವಗೆ ಚಳಿಯಿಲ್ಲ, ಮೊದಲೊಮ್ಮೊಮ್ಮೆ
ಕಳಕೆಬಂದರೆ ಕಂಪನಗಳಿಲ್ಲ, ಕಿವಿಹರಿಯೆ
ಮುಳುಪೊದರ ಭಯವಿಲ್ಲ, ಬಂದಿಯಾದವರು ಕಾರಾಗೃಹವ ಗಣಿಸಲುಂಟೆ? ॥
ತಿಳಿದುಕೊಂಡರು ರಾಜಕೀಯವಿಷಯಗಳನ್ನು,
ಮೊಳಗಿದುವು ವೃತ್ತಪತ್ರಗಳೆಂಬ ಮೇಘಗಳು,
ಹೊಳೆದುದಾತ್ಮಾಭಿಮಾನದ ಮಿಂಚು, ಬೀಸಿದುದು ಹುರುಪೆಂಬ ಗಾಳಿಯೆಲ್ಲ. ॥ ೩೯ ॥
ಮೂವತ್ತನೆಯ ವರುಷವಾಗೆ ಲಕ್ನೌ ಪುರದಿ
ಸಾವಿರದ ಒಂಬತ್ತು ನೂರ ಹದಿನಾರರಲಿ
ಭಾವೀಸ್ವರಾಜ್ಯದೇಳಿಗೆಯ ಮಳೆ ಸುರಿದುದಾ ರಾಷ್ಟ್ರೀಯಸಭೆಯ ಮುಖದಿ. ॥
ಭೂವಲಯದಲ್ಲಿರುವ ಭಾರತೀಯರು ತಾವು
ಭಾವಿಸದೆ ಹಿಂದು ಮಹಮದಿ ಕ್ರೈಸ್ತ ಭೇದವನು
ಕೇವಲ ಸ್ವರಾಜ್ಯದೊಂದೇ ಧ್ಯೇಯದಿಂದ ಪುನರಪಿ ಸಮ್ಮಿಲಿತರಾದರು. ॥ ೪೦ ॥
ಹರಿದ ಮೂಗನು ಸುರಿವ ವರವೈದ್ಯನಂದದಲಿ
ಭರತಭೂಮಿಯು ಸುಯೋಗವು ಕೂಡಿತೆಂಬಂತೆ
ಮುರಿದ ಶಾಂತೋಗ್ರಪಕ್ಷಗಳನೊಡಗೂಡಿಸಿದನಂದು ನಮ್ಮಾತಿಲಕನು. ॥

ಕರತಾಡನಗಳು ಆದುವು, ಹೂಮಳೆಗಳಲ್ಲಿ
ಸುರಿದುವು, ಸ್ವರಾಜ್ಯಘೋಷವು ದಿಕ್ಕಗಳಲೆಲ್ಲ
ತುರುಗಿತು, ಸ್ವರಾಜ್ಯಧ್ವಜವು ನೆಟ್ಟುದಹಹ! "ವಂದೇ ಮಾತರಂ ಮಾತರಂ" ॥ ೪೧ ॥

ಶಾಂತೋಗ್ರಪಕ್ಷಗಳು ಸಮ್ಮಿಲಿತವಾದೊಡನೆ
ಎಂತಾದರವರ ಮುರಿಬಡಿಯಬೇಕೆಂದು, ಅ
ತ್ಯಂತ ಕುಲುಷಿತರಾಗಿ ಬ್ರಾಹ್ಮಣೇತರರೆಂಬುದೊಂದು ಕೂಟವನು ಮಾಡಿ; ॥
ಇಂತು ಕೆಲರಸಹಿಷ್ಣುಜನರೆಂದರವರೊಡನೆ,
ಅಂತ್ಯಜರತೆರ ನಿಮ್ಮ ದೂಷಿಸುತ್ತಿಹರಲ್ಲ!
ಎಂತು ತಡೆಯುವಿರಿ! ಆ ಬ್ರಾಹ್ಮಣರಿಗೂ ನಿಮಗು ಭೇದವೇನಿಹುದು ನೋಡಿ. ॥ ೪೨ ॥

ನಿಮ್ಮಿಂದ ಬೇಕುಬೇಕಾದುದೆಲ್ಲವ ಗೈಸಿ,
ಸುಮ್ಮನೇ ಕುಳಿತು ತಿನ್ನುವರಲ್ಲ ಬ್ರಾಹ್ಮಣರು!
ಅಮ್ಮಮ್ಮ 'ನೋಡಿ ನಮಗಾದರೂ ಸಹನವಾಗದು ನಿಮ್ಮ ಈ ಕರ್ಮವ! ॥
ದುರ್ಮತಿಗಳವರು' ಬಲು ದುಷ್ಟರಾಗಿರುತಿಹರು,
ಒಮ್ಮನದಿ ನೀವೆಲ್ಲ ಸೇರುತೊಂದಾಗಿ, ಆ
ಬ್ರಾಹ್ಮಣರ ಮೂಲವನೆ ಕಿತ್ತೊಗೆಯಬೇಕಲ್ಲದಿರಲಿಲ್ಲ ಗತಿಯು ನಿಮಗೆ. ॥ ೪೩ ॥

ಮೊದಲೇ ಸ್ವರಾಜ್ಯವನು ಕೊಟ್ಟರಾಬ್ರಾಹ್ಮಣರು
ವಿಧಿಸುವರು ಪೂರ್ವದಾಮನುಧರ್ಮಶಾಸ್ತ್ರವನು,
ಹದಗೆಡುವುದದರಿಂದ ನಿಮ್ಮಕಾರ್ಯಗಳೆಲ್ಲ; ಅದಕೆ ನೀವಿದಿರು ನಿಂತು ॥
ಕದನವನು ಬಳಸಬೇಕವರೊಡನೆ, ನಮಗೀಗ
ಮೊದಲೇ ಸ್ವರಾಜ್ಯವಿದು ಬೇಡವೆಂದೆನಬೇಕು,
ಹುದಿದಿರುವ ಜಾತಿಭೇದಗಳೆಲ್ಲ ಹೋಗಿ, ಒಂದಾಗಬೇಕೂರಜನರು. ॥ ೪೪ ॥

ಇದರಿಂದ ನಿಮಗೆ ಸರ್ವಾರ್ಥಸಿದ್ಧಿಗಳೆಲ್ಲ
ಒದಗುವುವು; ಬ್ರಹ್ಮಯಜ್ಞವಮಾಡಬೇಕೆಂದು
ಮೆದುನುಡಿಗಳಿಂದವರ ಬೋಧಿಸಲು, ಅಹುದೆಂದು ಬಾಯಿಬಿಟ್ಟರು ಕೆಲವರು. ॥
ಬದನೆಕಾಯೆಂಬುದದು ಬಾಯ್ಗೆ ಸವಿಯಾದರೂ
ಅದನೆತಿಂದರೆ ಮತ್ತೆ ಮೈಯೆಲ್ಲ ಕಜ್ಜಾಗಿ
ಮಿದಿದುಹೋಗುವರೆಂದು ನೆನೆವರಾರ್? ಮೊದಲು ಬಾಯ್ಸವಿಯ ನೋಡುವರು
ಜನರು. ॥ ೪೫ ॥

ಈ ತೆರದಿ ಮುಂದಿನಾಸೆಯು ಸ್ವಾರ್ಥದಲಿ ಬಹಳ
ಹಾತೊರೆದು ತಮ್ಮ ಪೀಳಿಗೆಯು ಮರೆಯುತ, ಬ್ರಾಹ್ಮ
ಣೇತರರು ತಾವೆಂದು ನವನಾಮುಕರಣವನು ಮಾಡಿ ಇದಿರೊಡ್ಡಿ ನಿಂತು; ॥
ಜಾತಿಭೇದಗಳೆಲ್ಲ ಹೋಗುವವರೆಗೆ ಭರತ
ಭೂತಳಕೆ ಬೇಡವು ಸ್ವರಾಜ್ಯ; ಆದರಿಂದ ಬಲು
ಘಾತವಾಗುವುದು ನಮ್ಮಿ ಬ್ರಾಹ್ಮಣೇತರರ ಪಂಗಡಕ್ಕೆಂದರಂದು. ॥ ೪೬ ॥

ಬೋಧಿಸಿದ ಬುದ್ಧಿ ಎಂದಿನ ವರೆಗೆಬರುವುದದು?
ಹಾದಿಹೋಕನ ಬುತ್ತಿ ಎಲ್ಲಿವರೆಗುಳಿದೀತು?
ಊದಿದರೆ ಶಂಖದನಿಗೊಡುವುದೆಷ್ಟಷ್ಟು, ಈ ಬ್ರಾಹ್ಮಣೇತರರು ತಾವು ॥
ಓದಿದರು ಹೇಳಿಕೊಟ್ಟಂತೆ, ಕಡೆಯಲಿ ಕೆಲರು
ಖೇದವಿದು ತಮಗೆಂದು ತಿಳಿದುಕೊಂಡರು, ಹಲರು
ಆದ ಮೋಸಗಳನ್ನು ತಿದ್ದಿಕೊಂಡರು, ತಿಲಕನಮೃತೋಪದೇಶದಿಂದ. ॥ ೪೭ ॥

ಉರಿದುರಿದು ಮನಮರುಗಿ ತೀವ್ರಲೇಖನಗಳನು
ಬರೆಬರೆದು, ಜನರಿದಿರು ಪ್ರತ್ಯಕ್ಷವಾಗಿ ತಾ
ನೊರೆದೊರೆದು, ಭಾರತೀಯರ ಮನವನಾವರಿಸಿದಜ್ಞಾನ ಕಾನನವನು ॥
ತರಿತರಿದು ಬಿಸುಟು; ಸಾಮಾನ್ಯರ ಮನಸ್ಸುಗಳು
ಕರಕರಗುವಂತೆ ಬೋಧಿಸುತ, ಹೃದಯಾಬ್ಜದಲಿ
ಪರತತ್ವವನ್ನೆ ಧ್ಯಾನಿಸುತಿದ್ದನಂದಾ ಸರಸ್ವತೀಧ್ವಜ ತಿಲಕನು. ॥ ೪೮ ॥

ನಾಲ್ಕನೆ ಸಂಧಿ ಸಂಪೂರ್ಣ.

**ಸಂಧಿ ನಾಲ್ಕಕ್ಕೆ ಪದ್ಯ ೧೩೨.**

# ಐದನೆ ಸಂಧಿ.

**ಸೂಚನೆ:**

ದೇಶೀಯರನು ಕಣ್ಣು ತೆರೆಯಿಸುವ ಕಾರ್ಯಕೆ ವಿ
ಶೇಷಪ್ರಯತ್ನಗಳ ಮಾಡುತದರಿಂದ ಬಲು
ಕ್ಲೇಷಗಳನನುಭವಿಸಿ, ಜಗವರಿಯೆ ಲೋಕಮಾನ್ಯತೆಯನ್ನು ಕೈಕೊಂಡನು.॥

ಆಲಿಸುವುದಿನ್ನು ಮುಂದಿನಕಥೆಯ ಮುನಿಗಳಿರ!
ಬಾಲಗಂಗಾಧರಗೆ ಬೇರೊಂದೆಣಿಕೆಯಿಲ್ಲ;
ಆಲೋಚಿಸುವುದು, ಅದನಾಡುವುದು, ಆಡಿದುದನೇ ಮಾಡಿತೋರಿಸುವುದು. ॥

ಮೇಲಾದ ಭಾರತೀಯರ ಚರಿತೆಯಿಂದಲಿ, ವಿ
ಶಾಲವಾಗಿರುವ ಗೀತಾರ್ಥದಿಂದಲಿ, ಮುಸುಕಿ
ದಾಲಸ್ಯವನು ತೊಲಗಿಸುತ, ಎಲ್ಲರಲ್ಲೊಂದು ತೆರದ ಕಳೆಯನು ತಂದಸು. ॥ ೧ ॥

ಗುರುವಾದರೇನು? ಸಲ್ಲದ ಕೆಲಸವಮಾಡುವವ
ಹಿರಿಯನಾದರದೇನು? ಆರಾದರೇನವನ
ತರಿದು ಬಿಡುವುದೆ ನಮ್ಮ ಕರ್ತವ್ಯಕರ್ಮವೆಂದರುಹುವುದು ಗೀತಾರ್ಥವು. ॥
ಪರಕೀಯರಿಗೆ ನಮ್ಮ ದೇಶವೆಂದೆನುತ, ದೇ
ವರು ತಾಮ್ರಶಾಸನವ ಬರೆದು ಕೊಟ್ಟದ್ದಿಲ್ಲ,
ಪರರನೋಡಿಸುವ ಯತ್ನವ ಮಾಡಿದನು ಶಿವಾಜಿಯು ತನ್ನ ದೇಶದಿಂದ. ॥ ೨ ॥

ಮನೆಯೊಳಗೆ ಕಳ್ಳನಿರಲವನನೋಡಿಸುವಷ್ಟು
ತನಗೆ ಸಾಮರ್ಥ್ಯ ಸಾಲದು, ಎಂದೆನುತ್ತ ಸು
ಮ್ಮನೆ ಕುಳಿತುಕೊಳ್ಳುವುದೆ? ಬಾಗಿಲುಗಳನು ಮುಚ್ಚಿ ಬೆಂಕಿಯನು ಕೊಟ್ಟು ಸುಟ್ಟು; ॥
ಹನನವಮಾಡುವುದು, ಬಾವಿಯ ಕಪ್ಪೆಯಾಗದಿರಿ;
ಪಿನಲುಕೋಡನುದಾಟ, ಗೀತೆಬೋಧಿಸುವಂಥ
ಘನವಾಯುಮಂಡಲದಿ ಚರಿಸುತ, **ವಿಭೂತಿಪುರುಷರ** ಕುರಿತು ಯೋಚಿಸುವುದು. ॥ ೩ ॥

ಈರೀತಿ ಭಾಷಣವ ಮಾಡಿದನು ತಿಲಕನೆಂ
ಬಾರೋಪದಿಂದ ಹದಿನೆಂಟು ತಿಂಗಳು ಕಠಿಣ
ಕಾರಾಗೃಹವಕೊಟ್ಟರದರಿಂದ ಲೋಕವೆಚ್ಚತ್ತು ಕಣ್ಣನುತೆರೆಯಿತು; ॥
ಭೂರಿವಿದ್ವಾಂಸನಾ ಮೇಕ್ಸಮುಲ್ಲರನು ಈ
ವಾರತೆಯನರಿತು ವಿಕ್ಟೋರಿಯಾ ರಾಣಿಯಲಿ
ಈ ರೀತಿಬಿನ್ನೈಸಿದನು "ತಿಲಕನೆಂಬವನು ಸಾಮಾನ್ಯನೇ ಲೋಕದಿ? ॥ ೪ ॥

ಆಕಾಶಚಾರಿಯಲ್ಲದೆಯುವಿದ್ಯಾಧರನು,
ನಾಕಪತಿಯಲ್ಲದೆಯು ಸುಮನಸಶ್ರೇಷ್ಠನಿ
ಕ್ಷ್ವಾಕುವಂಶಜನಲ್ಲದಿದ್ದರೂ ಶ್ರೀರಾಮಮೂರ್ತಿಯಾಗಿದ್ದು ಬಿಡದೆ, ॥
ಲೋಕಭರಿತನು ವಾಯುವಲ್ಲ, ಚತುರಾನನನು
ಲೋಕೇಶನಲ್ಲ, ಸೌಭಾಗ್ಯವತಿ ಸತ್ಯಭಾ
ಮಾಕಾಂತನಾಗಿ, ಗೋವಳರಾಯನಲ್ಲವೆಂದೆನಿಸಿ ಮೆರೆಯುತ್ತಿರುವನು. ॥ ೫ ॥

ಹೀಗಿರುವ ವಿದ್ವನ್ಮಣಿಗೆ ನಿನ್ನ ದೇಶದಲಿ
ಆಗುವುದು ಶಿಕ್ಷೆ ಎಂದರೆ, ಕುಂದು ಸಾಮ್ರಾಜ್ಯ
ಕಾಗದಿರದದರಿಂದ ಬಿಡುವುದೆನುತಲಿ ಮೇಕ್ಸಮುಲ್ಲರನು ಬೇಡಿಕೊಳಲು; ॥

ಹಾಗೊ! ಎನುತಲಿ ಮಹಾರಾಣಿ ಬಿಡುಗಡೆಮಾಡು
ವಾಗ ಹನ್ನೆರಡು ತಿಂಗಳು ಕಳೆಯಿತದು ವ್ಯರ್ಥ
ವಾಗಲಾರದು. "ಆರ್ಯಮೂಲವಸತಿಸ್ಥಾನ"ವೆಂಬ ಗ್ರಂಥವ ಬರೆದನು. ॥ ೬

"ವೇದನಿರ್ಣಯಕಾಲ"ವೆಂಬ ಗ್ರಂಥವನು ತಾ
ನಾದಿಯಲಿ ಬರೆದಿರುವನಾಮೇಲೆ ಈ ಗ್ರಂಥ
ವಾದುದೀಕಾರಣದಿ ಲೋಕದಲಿ ತಿಲಕವಿದ್ವತ್ಪ್ರಸಾರಣೆಯಾಯಿತು. ॥
ಮೇದಿನಿಯಲೆಲ್ಲ "ಬಲವಂತರಾಯನು ನಿರಪ
ರಾಧಿ" ಎಂದೆಣಿಸಿದ್ದಕಾರಣ ಜನಪ್ರೀತ
ನಾದನದುಮೊದಲಾಗಿ ಸ್ವಾತಂತ್ರ್ಯದೇವಿಯಔರಸಪುತ್ರನಾದನವನು. ॥ ೭

ಮತ್ತೆ ಕೇಸರಿಯ ಕಾರ್ಯವನು ಕೈಕೊಳ್ಳುತಲಿ
ಅತ್ಯಧಿಕ ಗಂಭೀರವಾದ ಲೇಖನವ ಬರೆ
ಯುತ್ತಲಿದ್ದನು, ಹೆದರಿದನೆ, ಕರ್ಮಯೋಗಿಗಾರದುಭಯವು ಲೋಕದಲ್ಲಿ? ॥
ಇತ್ತಲಧಿಕಾರಿಗಳ ಮನವ ತಿಲಕನ ಕೀರ್ತಿ
ಹೊತ್ತಿಸುತ್ತಿದ್ದುದದರಿಂದ ಕಾರಣವ ಹುಡು
ಕುತ್ತಲಿರಲವರ ಮನಕೊಂದು ಲೇಖನವು ರಾಜದ್ರೋಹಕರವಾಯಿತು. ॥ ೮

ಇದು ಸಮಯವೆಂದು ತಪ್ಪನು ಹೊರಿಸುತವರಿಗೊ
ಪ್ಪಿದ ಆ ವಿದೇಶೀಯರೇಳುಮಂದಿಗಳಿಂದ
ಒದಗಿಸಿದರೊಂದು ಹೊಸನ್ಯಾಯಮಂದಿರವನಿದಕೆಂದು ಪ್ರತ್ಯೇಕವಾಗಿ. ॥
ಅಧಿಕಬಲಯುತರು ಯಮದೂತರಂದದಲಿ ಆ
ಯುಧಗಳನು ಧರಿಸಿರುವ ರಾಜಭಟರಿಂದಲೊ
ಪ್ಪಿದುದಂದು ಪ್ರೇತಪತಿಯಾಸ್ಥಾನವೆಂಬತೆ ಗಂಭೀರಮುದ್ರೆಯಿಂದ. ॥ ೯

ಸಾಲಾಗಿ ಮುಂದಿಟ್ಟ ವೇತ್ರಾಸನಗಳಲಿ ವ
ಕೀಲರೆಲ್ಲರು ಕುಳಿತಿರಲು, ಒಡನೆ ಬಂದನಾ
ಮೇಲೆ ದಾವರನೆಂಬ ನ್ಯಾಯಾಧಿಕಾರಿ ನಿಯಮಿತವಾದ ಸಮಯದಲ್ಲಿ. ॥
ಕಾಲಪುರುಷನು ಕಲಿಯುಗದಿ ಬಿಳಿಯ ಬಣ್ಣವನು
ತಾಳಿದನೊ! ಭರತಖಂಡದ ಶಾಂತತೆಯನಿಂದು
ಸೀಳಿದನೊ! ಎಂದು ಜನರುದ್ವೇಗಿಸುತ ಸಾಲುಸಾಲಾಗಿ ನೆರೆದಿದ್ದರು. ॥ ೧೦

ಆ ಸಮಯದಲ್ಲಿ ಹಿಡಿತಂದು ನಿಲಿಸಿದರು ಆ
ವೇಶಭರದಿಂದ ಮೆರೆಯುತ್ತಿರುವ ಭಾರತದ
ಕೇಸರಿಯನಾರೋಪಿತರ ನಿಲಿಸುವಲ್ಲಿ ಕಟ್ಟಾಸುರದ ರಾಜಭಟರು. ॥

ದ್ವೇಷಮುಖದಿಂದ ದಾವರಮುಖ್ಯರೆಲ್ಲರು ವಿ
ಶೇಷಪ್ರಯತ್ನಗಳ ಮಾಡುತೀರೀತಿಯಲಿ
ದೋಷವನು ಹೊರಿಸಿದರು ಬೇಕುಬೇಕಾಗಿರುವ ಯುಕ್ತಿಪ್ರಯುಕ್ತಿಯಿಂದ ॥ ೧೧ ॥

ಲೋಕದಲಿ ಆ ಸ್ವದೇಶೀಯ ಚಳವಳವ ಉ
ದ್ರೇಕಿಸಿದೆ; ದೇಶದಾದುರ್ದೈವವೆಂದೆನುತ
ಟೀಕಿಸಿದೆ ಸರಕಾರವನ್ನು ಉದ್ದೇಶಿಸುತ; ಅದು ಸಾಲದಿರಲು ಬಳಿಕ, ॥
ಏಕಮನದಿಂದಾಂಗ್ಲರನ್ನೋಡಿಸುವ ವ್ರತವ
ಸ್ವೀಕರಿಸಿನಿಂತು, ಕೇಸರಿಪತ್ರದಲ್ಲುಗ್ರ
ಲೇಖನಗಳನ್ನು ಮಾರ್ಮಿಕವಾಗಿ ಬರೆದೆ; ಇದನೆಲ್ಲ ಆಲೋಚಿಸಿದರೆ. ॥ ೧೨ ॥

ನಿನ್ನ ಲೇಖನವು ಜನಮನದಲ್ಲಿ ಒಂದು ವಿಧ
ಭಿನ್ನತೆಯನುಂಟುಮಾಡಿದೆ; ಲೋಕದಲ್ಲಿ ಆ
ನಿನ್ನ ಭಾಷಣವು ರಾಜದ್ರೋಹಿಗಳ ತಯಾರಿಸಿದೆ; ಆ ಕಾರಣದಲಿ ॥
ನನ್ನ ಮತದಿಂದ ರಾಜದ್ರೋಹಿನೀನೆಂದು
ನಿರ್ಣೀತವಾಗಿಹುದು; ಈ ವಿಷಯಗಳಿಗೆಲ್ಲ
ನಿನ್ನ ಉತ್ತರವೇನು ಹೇಳೆಂದೆನಲು ತಿಲಕನಾವೇಶಭರದಿಂದಲಿ. ॥ ೧೩ ॥

ಈ ಸ್ವದೇಶೀಯ ಚಳವಳವು ಕಾಯಿದೆಯಿಂದ
ದೋಷವೆಂದಾವ ಕೋಡಿನಲಿ ಕಾಣುವುದು? ಈ
ದೇಶಕ್ಕೆ ಬಂದ ದುರ್ದೈವವೆಂದರೆ, ಅದಕೆ ದುರದೃಷ್ಟವೆಂದರ್ಥವು. ॥
ದೇಶಭಾಷೆಯ ಮರ್ಮ ಹೀಗಿರುವುದೆನುತಲಿ ವಿ
ಶೇಷ ತಾರ್ಕಿಕರೀತಿಯಿಂದ ಇಪ್ಪತ್ತೊಂದು
ತಾಸು ವಾದಿಸುತವರ ಬಾಯಿಗರಗಿನ ಮುದ್ರೆಯನ್ನೊತ್ತೆ ತಿಲಕನಂದು. ॥ ೧೪ ॥

ಅಧಿಕಾರಿಮಂಡಲದ ಬಲದಿಂದ ಕಾಯಿದೆಯ
ಒದಗಿಸುತ ಬೆಟ್ಟುಕಚ್ಚುತ ದಾವರನು ತನ್ನ
ಬದಿಯಲ್ಲಿ ಕುಳಿತ ಜೂರಿಗಳೊಡನೆ ಚರ್ಚಿಸಿದನಾಕ್ಷೇಪವಾರದಿಹುದು? ॥
ಬದಲೇನು ಆರುವತ್ಸರ ಕಠಿಣಶಿಕ್ಷೆಯನು
ವಿಧಿಸುವುದ ನಿಶ್ಚೈಸಿ, ನಿನಗೇನುಕೇಳಲಿರು
ವುದು, ಕೇಳಿಕೊಳ್ಳೆನಲು, ದೇಶಮಾತೆಯ ಸ್ಮರಿಸಿ ವೀರಮುದ್ರೆಯನು ಧರಿಸಿ. ॥ ೧೫ ॥

**"ರಾಷ್ಟ್ರ ಸಂಬಂಧಗಳ ಬಳೆಯಿಸುವುದೊಂದು ಉ**
**ತ್ಕೃಷ್ಟಶಕ್ತಿಯು ಮನುಷ್ಯನ ಶಕ್ತಿಯಿಂದಲೂ**
**ಶ್ರೇಷ್ಠವಾಗಿದೆ. ನಾನು ನಿರ್ದೋಷಿಯಾಗಿರುವೆನಾದರೂ ನನ್ನನಿಂದು ॥**

**ಕಷ್ಟಕೀಡಾಗಿಸುತ, ಭಾರತವನುದ್ಧರಿಸು**
**ವಿಷ್ಟವಾಶಕ್ತಿಗಿಹುದಾದ ಕಾರಣದಿಂದ**
**ಹುಟ್ಟೂರಿಗಾಗಿ ಜೀವವ ಕೊಡುವೆನಿದ ಆಣೆಯಿಟ್ಟು ಹೇಳುವೆ"ನೆಂದನು. ॥ ೧೬ ॥**
**ನನ್ನ ದುಃಖಗಳನೆಲ್ಲ ವಸಹಿಸಿ, ರಾಷ್ಟ್ರಮುಖ**
**ವನ್ನು ತೇಜಃಪುಂಜವಾಗಿ ಮಾಡುವೆನು; ಈ**
**ನನ್ನ ದೇಹವ ಸವೆಯಿಸುತಲಿ ರಾಷ್ಟ್ರೋನ್ನತಿಯ ಮಾಡುವೆನು, ಸಾಲದಿರಲು;**
**ನನ್ನಜೀವವನಿತ್ತು ರಾಷ್ಟ್ರಕ್ಕೆ ಹೊಸಜೀವ**
**ವನ್ನು ತಂದೀವೆನೀಜಡದೇಹದಿಂದೇನು?**
**ನನ್ನ ದೇಶಕೆ, ನನ್ನದೇಶಬಾಂಧವರಿಗೆಂದಿದನರ್ಪಿಸಿಹೆನೆಂದನು. ॥ ೧೭ ॥**
**ನರರ ನ್ಯಾಯಸ್ಥಾನದಲ್ಲಿ ತಪ್ಪುಗಳನ್ನು**
**ಹೊರಿಸುವಿರಿ; ಅದಕೇನು? ಮೇಲಿರುವುದೊಂದುದೇ**
**ವರ ನ್ಯಾಯಮಂದಿರವು, ಅಲ್ಲಿ ನಿರ್ದೋಷಿಯಾಗಿರುವೆ ನಾನೆಂಬುದನ್ನು ॥**
**ಮರೆಯದಿರಿ; ನಿಮ್ಮ ಶಿಕ್ಷಾರಕ್ಷೆಗಳು ಎಲ್ಲ**
**ಹೊರಗಣೀ ದೇಹಕ್ಕೆ, ಒಳಗಿರುವ ಜೀವನಿಗೆ**
**ಸೇರೆಯಿಲ್ಲ" ಎಂದನದು ಧರೆಯಲಿ ಸುವರ್ಣಾಕ್ಷರದಲಿ ಶಾಸನವಾಯಿತು. ॥ ೧೮ ॥**
ಏನು ದೇಶಪ್ರೇಮವೇನುಸತ್ಯ ಪ್ರೇಮ?
ಏನು ತನ್ನಯ ದೇಶಬಾಂಧವರಲಿಹಪ್ರೇಮ?
ಏನು ಸ್ವಾತಂತ್ರ್ಯಲಕ್ಷ್ಮೀಪ್ರೇಮ? ಇದುವೆ ನಿಜವಾದ ಮಾನವ ಜನ್ಮವು. ॥
ಈ ನಮ್ಮ ತಿಲಕನೇ ದೇಶಭಕ್ತಿಯ ಪಿಂಡ,
ಈ ನಮ್ಮ ತಿಲಕನೇ ಸತ್ಯಸಂಧರ ಗಂಡ,
ಈ ನಮ್ಮ ತಿಲಕನೇ ದೇಶೀಯರಸ್ವತಂತ್ರದ ಶರಭಭೇರುಂಡನು. ॥ ೧೯ ॥
ಎಡೆಬಿಡದೆ ನನ್ನ ಪೂಜಿಸುತ ಗಂಗಾಧರನು
ಪಡೆದಿರುವನೀ ತಿಲಕನನ್ನು ದಾವರನಿವಗೆ
ಕೊಡುವ ಶಿಕ್ಷೆಯನೀಗ ನೋಡಿ ಸೈರಿಸುವುದಕೆ ಸಾಧ್ಯವಿಲ್ಲೆಂದೆನ್ನುತ, ॥
ಪಡುಗಡಲ ಸೇರಿದನು ಸೂರ್ಯನಾಸಮಯದಲಿ
ಒಡಗೊಂಡುದಾಕಾಶದಲ್ಲೆಲ್ಲ ಕಡೆಗಳಲಿ
ಕಡುಗೆಂಪು, ಭಾರತೇಯರ ಸ್ವರಾಜ್ಯಾನುರಾಗವು ಉಕ್ಕಿ ಹರಿವಂದದಿ. ॥ ೨೦ ॥
ಭರತ ಖಂಡದ ಸ್ವರಾಜ್ಯಾಮೃತದಿ ವಿಷವನ್ನು
ಬೆರಸುವಾಲೋಚನೆಯಲಿಹರಾಂಗ್ಲೊ ಇಂಡಿಯನ್
ದೊರೆಗಳೀರೀತಿ, ಎಂಬುದ ತೋರುವಂತೆ ಕಾರಿರುಳು ಆವರಿಸಿತಾಗ. ॥

ಮಿರುಗುಟ್ಟದುವು ತಾರಕಿಗಳೆಂದು ನಿಮ್ಮ ಕಡೆ
ಗಿರುವೆವೆನ್ನುತ ಮುಂದೆಬರುವ ವೆಜುವುಡ್ಡ, ಆ
ವರ ಹಾರ್ನಿಮನ್ನ, ಹಾರ್ಡಿಂಜ, ಆಸ್ಕ್ವಿತ, ಲೇನ್ಸಬರಿ ಮುಖ್ಯರೆಂಬಂದದಿ. ॥ ೨೧ ॥

ಹಿಂದೀಗಳಲ್ಲಿ ಕೆಲಮಂದಿ ಸ್ವಾರ್ಥಿಗಳಾಗಿ
ಹೊಂದಿರುವರಾಂಗ್ಲೋಇಂಡಿಯನರನ್ನದು ಒಂದು
ಕುಂದು ತೋರುವುದು ಈ ರೀತಿ, ಭಾರತಸ್ವರಾಜ್ಯಕ್ಕೆಂದು ತೋರುವಂತೆ; ॥
ಕಂದನ್ನು ಒಳಕೊಂಡು ಪೂರ್ವಾದ್ರಿಶಿಖರದಲಿ
ಚಂದಿರನು ತಳತಳಿಸಿ ಮೂಡಿದನು ಭಾರತಕೆ
ಮುಂದೆಬೇಗನೆ ಸ್ವರಾಜ್ಯವನೀವೆನೆಂದು ಅಪ್ಪಣೆಕೊಡುವ ರಾಜನಂತೆ. ॥ ೨೨ ॥

ದೃಢಮನದಿ ನನ್ನ ಸೇವಿಸುತಿರುವ ತಿಲಕನಿಗೆ
ಕೊಡುವರೀ ಅಧಿಕಾರಿಗಳು ಶಿಕ್ಷೆಯನ್ನೆಂದು,
ತಡೆಯಲಾರದ ಹೊಟ್ಟೆಯುರಿಯಿಂದ ಭರತಭೂಮಾತೆ ಬೆವರಿದಳೆನ್ನಲು, ॥
ಪೊಡವಿಯೆಲ್ಲವು ಹಿಮಕಣಗಳಿಂದ ಮುಸುಕುತಿರೆ
ನಡೆದರೆಲ್ಲರು ನಾಳೆ ಮುಂಜಾನೆ ಬಂದಿಲ್ಲಿ
ಒಡಗೂಡಬೇಕೆಂದು ದೃಢನಿಶ್ಚಯವ ಮಾಡಿ ಕಡುತಿಲಕಭಕ್ತರಂದು. ॥ ೨೩ ॥

ಅಂದು ಮಾರ್ಕಾಂಡೇಯ ಮುನಿಯ ಯಮದೂತರ್ರೈ
ತಂದು ಪಾಶದಿ ಕಟ್ಟ ಕೊಂಡ್ಯೊವ ತೆರದಿಂದ
ಇಂದು ನಮ್ಮಾ ದೇಶಭಕ್ತಾಗ್ರಗಣ್ಯನನು ಆರರಿಯದಂತೆ ಹಿಡಿದು, ॥
ಬಂಧಿಸುತ. ಇರುಳು ಹೊಗೆಗಾಡಿಯನ್ನೇರಿಸುತ.
ಮುಂದುವರಿಸುತ ಬ್ರಹ್ಮದೇಶದಲ್ಲಿರುವೊಂದು
ಬಂದಿಖಾನೆಯಲಿಟ್ಟರಿತ್ತ ಮುಂಬಾಪುರದಿ ಗಜಬಜಕೆ ಮೊದಲಾಯಿತು. ॥ ೨೪ ॥

ಒಂದೆಡೆಗೆ ಧನವಂತರೆಲ್ಲ ನೆರೆಯುತ್ತ, ಇ
ನ್ನೊಂದೆಡೆಗೆ ಗತಿಗೆಟ್ಟ ಭಿಕ್ಷುಕರಮೊತ್ತ, ಮ
ತ್ತೊಂದೆಡೆಗೆ ವ್ಯಾಪಾರಿಗಳು ಹೊಟ್ಟೆ ಹೊಸೆಯುತ್ತ, ಇರುತಿರುವುದನು ಕಾಣುತ; ॥
ಬಂದುದಲ್ಲಿಗೆ ಕೂಲಿಕಾರಸಮುದಾಯ! ಏ
ನೆಂದು ಹೇಳುವೆನವರ ಮನದುರಿಗೆ ಪಟ್ಟಣವೆ
ಬೆಂದುಹೋಯಿತು, ತಿಲಕಗೀರೀತಿಯಾಯಿತೇ! ಎಂದೆಂದುಕೊಳುತಿದ್ದರು. ॥ ೨೫ ॥

ಭಾರತೀಯರ ಪ್ರಾಣವನ್ನು ಕೊಂಡ್ಯೊದೀಗ
ಕಾರಾಗೃಹದಲಿಟ್ಟರುವರೆ! ಹಾ, ನಮಗಿನ್ನು
ಯಾರುಗತಿ! ನೀನಿಲ್ಲದೆಲ್ಲವೂ ಕಾರುಗತ್ತಲೆಯಾಗಿ ತೋರುತಿಹುದು. ॥

ಈ ರೀತಿ ನಮ್ಮನ್ನಂಚಿಸಿ ಹೋಗಬಹುದೇನು?
ಕಾರುಣ್ಯವಿಲ್ಲದಾಯಿತೆ ನಮ್ಮ ಮೇಲೆನುತ,
ಚೀರಿಟ್ಟು, ಬಾಯಿಬಾಯ್ಬಡಿಯುತ್ತ, ತಲೆತಿರುಕರಾಗಿ ತಿರುಗುತ್ತಿದ್ದರು. ॥ ೨೬ ॥

ಎಲ್ಲಿ ಹೋದನು ನಮ್ಮ ಬಾಲಗಂಗಾಧರನು!
ಎಲ್ಲಿ ಹೋದನು ನಮ್ಮ ದೇಶಸೇವಾಪರನು!
ಎಲ್ಲಿ ಹೋದನು ನಮ್ಮ ಭಾರತೀಯರ ಅನಭಿಷಿಕ್ತನಾಗಿಹ ರಾಜನು! ॥
ಎಲ್ಲಿ ಹೋದನು ಸತ್ಯನಿಷ್ಠನುತ್ಕೃಷ್ಟನಿ
ನ್ನೆಲ್ಲಿ ಹೋದನು ದೇಶಭಕ್ತಕಾರ್ಯಾಸಕ್ತ
ನೆಲ್ಲಿ ಹೋದನು! ನಮ್ಮ ವಂಚಿಸುತ ಕೊಂಡ್ಯೊದರಕಟ! ನಾವಿಲ್ಲದಿರಲು! ॥ ೨೭ ॥

ತೆರೆಯಬಾರದು ಅಂಗಡಿಗಳ ಬಾಗಿಲುಗಳನು,
ಧರಿಸಬಾರದು, ಸಂತಸದ ಉಡುಪುಗಳನು, ಆ
ಚರಿಸುವುದು ಹನ್ನೊಂದು ದಿನ ಅಮಾಂಗಲ್ಯವನು, ಭರತ ಖಂಡದ ಸೂರ್ಯನ; ॥
ಸೆರೆಹಿಡಿಯಿತಧಿಕಾರಿಮಂಡಲದ ರಾಹು, ಬಾ
ಯ್ದೆರೆಯದಿರಿ, ಎಂದು ಬೀದಿಗಳಲ್ಲಿ ಕೂಗುತ್ತ
ತಿರುಗುತಿದ್ದರು, ಕಂಡಕಂಡ ಮಳಿಗೆಗಳ ಬಾಗಿಲುಗಳನು ಹಾಕಿಸಿದರು. ॥ ೨೮ ॥

ಪಡಿದೆರೆಯಲೊಡನೆ ಮಳಿಗೆಗಳ ಬಾಗಿಲುಗಳನು
ಜಡಿದೊಡೆದು ಕೆಡಹಿದರು, ಮಾತಾಡಿದವರ ಬಾ
ಯ್ಬಡಿದರಡಿಗಡಿಗೆ ಗಡಬಡಿಸುತಲವರು ಕಂಡಕಡೆಗೆ ಹರಿಯುತ್ತಿದ್ದರು. ॥
ಒಡನೊಡನೆ ಬಂದಬಂದಲ್ಲಿ ಬರುಬರುತಿರದೆ
ಘುಡುಘುಡಿಸಿ, ತಿಲಕನ ವಿರುದ್ಧನುಡಿದವರತಲೆ
ಯೊಡೆದೊಡೆದು ಪಟ್ಟಣವನೆಡೆಬಿಡದೆ ನೆತ್ತರಿನ ಕಡಲಿನಲಿ ಮುಳುಗಿಸಿದರು. ॥ ೨೯ ॥

ಹಾರಿದರು ಜನರ ಗೊಂದಲದಲ್ಲಿ, ಬಂದವರ
ಹಾರಿಸಿದರಾರಾರ ಹಣೆಯಿಂದ ನೆತ್ತರಿನ
ಧಾರೆಯನು ಸುರಿಸಿದರು, ಹಿಡಿಹಿಡಿದು ಕೆಲಕೆಲರ ಮಾರಿದರು ಯಮರಾಜಗೆ; ॥
ಏರಿದವರನು ಗುದ್ದಿ ಬಾಯಿಂದ ರಕ್ತವನು
ಕಾರಿಸಿದರಾರಾರ ಮೇಲಿರುವ ವೈರವನು
ತೀರಿಸಿದರಲ್ಲಿ ಸಿಕ್ಕಿದ ವಸ್ತುಗಳ ತೆಗೆದು ಬೀರಿದರು ಬೀದಿಯಲ್ಲಿ. ॥ ೩೦ ॥

ಅಟ್ಟಿದರು, ಮುಟ್ಟಿದರು, ತಟ್ಟಿದರು, ಕುಟ್ಟಿದರು,
ಹೆಟ್ಟಿದರು, ಕಟ್ಟಿದರು, ಮೆಟ್ಟಿದರು, ಒಟ್ಟಿದರು,
ರಟ್ಟಿದರು, ಕೊಟ್ಟರಿಟ್ಟರು ಕಟ್ಟಗೆಗಳಲ್ಲಿ ಸಿಟ್ಟಿಂದ ಕಟಾಳ್ಗಳು. ॥

ಕೆಟ್ಟೋಡಿದರು, ದೇಶಬಿಟ್ಟೋಡಿದರು, ಕಷ್ಟ
ಪಟ್ಟೋಡಿದರು, ಜೀವಕೊಟ್ಟೋಡಿದರು ಕೆಲರು,
ಕಟ್ಟಕಡೆಯಲ್ಲವರ ದಿಟ್ಟಸುವ, ದಟ್ಟಸುವ, ಹುಟ್ಟಸುವ ಭೀತಿಯಿಂದ. ॥ ೩೧ ॥

ಎಲ್ಲಿಂದಬಂದುದೀಪಡೆಯುಕಟಕಟ! ಒಂದು
ಎಳ್ಳು ಹಾಕಲು ಕೆಳಗೆ ಬೀಳದಂತಿದೆ, ಜನರ
ಗುಲ್ಲು ಕಿವಿಯನು ಕಿವುಡುಮಾಡುತಿದೆ, ದೇವರೇ ಬಲ್ಲನೀ ಸಂಗತಿಯನು! ॥
ಇಲ್ಲವೀರೀತಿ ಜನಸಮುದಾಯವನು ಕಾಣ
ಲಿಲ್ಲ! ಈ ವರೆಗೆಂದು ಹಣ್ಣುಮುದುಕರು ಬಾಯಿ
ಜೊಲ್ಲುಸುರಿಸುತ, ಬೀದಿಯೆರಡು ಕಡೆಯಲಿ ನೋಡುತಲ್ಲಲ್ಲಿ ನಿಂತಿದ್ದರು. ॥ ೩೨ ॥

ಈ ರೀತಿಯಿಂದ ಪಟ್ಟಣದಲೆಲ್ಲಾ ಕಡೆ, ಕ
ಠೋರವಾಗಿಹ ಜನರ ಗಡಿಬಿಡಿಯ ಕಂಡು, ಸರ
ಕಾರದವರೆಚ್ಚತ್ತು, ನಯಭಯಗಳಿಂದವರ ಬಂದು ಸಂತೈಸಿ ಬಳಿಕ; ॥
ಸಾರಿದರು ಡಂಗುರವ "ನಿಮ್ಮ ತಿಲಕನಿಗಾದ
ಆರು ವರುಷದ ಕಠಿಣ ಶಿಕ್ಷೆಯನು ನಾವೇ ಸು
ಧಾರಿಸುವೆವಿನ್ನು ಮನೆಯಲ್ಲಿರುವ ತೆರದಲಿ ವಿರಾಮವಾಗಿರುವನಲ್ಲಿ." ॥ ೩೩ ॥

ಹೀಗೆ ಜನರನ್ನೊಡಂಬಡಿಸಿ ಶಾಂತತೆಯನ್ನು
ಹೇಗಾದರೂ ಮಾಡಿದರು, ಮುಂದಕದುವೆ ಸುಖ
ವಾಗಿ ತೋರಿತು, ಮಹಾಪುರುಷರ ಚರಿತ್ರವೆ ವಿಚಿತ್ರವಲ್ಲವೆ ಲೋಕದಿ? ॥
ಈಗಿನೀ ಸಮಯವೇ ವಿಶ್ರಾಂತಿ ಕಾಲವೆನ
ಗಾಗಿರುವುದೆಂದರಿತು, ಲೋಕೋತ್ತರದ ಕರ್ಮ
ಯೋಗಶಾಸ್ತ್ರವ ಬರೆದು, ಗೀತಾರಹಸ್ಯವೆಂದೆಂಬ ನಾಮವನಿಟ್ಟನು. ॥ ೩೪ ॥

ಎಲ್ಲರೂ ತಲೆದೂಗುವಂತಿರುವ ಗ್ರಂಥವಿದ
ನೆಲ್ಲ ಭಾಷೆಗಳಲ್ಲಿ ಪರಿವರ್ತಿಸಿದರು, ಎ
ಲ್ಲೆಲ್ಲಿಯೂ ಗೀತಾರಹಸ್ಯವೆಂದರೆ, ತಿಲಕಮಾಹಾತ್ಮ್ಯ ಸಾಮಾನ್ಯವೆ? ॥
ಎಲ್ಲರೂ ಕರ್ಮಯೋಗಿಗಳಾದರದರಿಂದ
ಎಲ್ಲಿದ್ದರೂ ದೇಶಸೇವೆ ಮಾಡುವ ಕಾರ್ಯ
ವಲ್ಲದಿನ್ನೊಂದಿಲ್ಲವೆನ್ನಲಿವನೇ ಜಗದ್ಗುರುವಲ್ಲವೇ ನೋಡಲು? ॥ ೩೫ ॥

ಇತ್ತಲಿಂತಿರುವ ಸಮಯದಿ ತನ್ನ ಮನೆಯಲ್ಲಿ
ಸತ್ಯಭಾಮಾಬಾಯಿ, ಪತಿವಿಯೋಗದಲಿ ಬೇ
ಸತ್ತು, ದಿನದಿನ ಚಿಂತಿಸುತ್ತಲೊಂದಿನಕಡೆಗೆ ಮರ್ತ್ಯಲೋಕವನೆ ಬಿಟ್ಟು; ॥

ಉತ್ತರೋತ್ತರವಾದ ಪರಲೋಕಕ್ಕೈದಿದಳು,
ಮತ್ತೊಂದು ಸುಮುಹೂರ್ತದಲ್ಲಿ ಜನರಾರಿಗೂ
ಗೊತ್ತಾಗದಂತೆ ನಡುವಿರುಳು ತಿಲಕನನು ಮನೆಯಲಿ ತಂದು ಬಿಟ್ಟರಂದು. ॥ ೩೬ ॥

ಪಟ್ಟಣದಲೆಲ್ಲೆಲ್ಲ ಹಬ್ಬಿದುದು ಗಾಳಿಯಲಿ
ಕೊಟ್ಟ ಪರಿಮಳದಂತೆ ಬಾಲಗಂಗಾಧರನ
ಬಿಟ್ಟ ವಾರತೆಯು, ಕಿವಿಕಿವಿಯಿಂದ ಬಾಯಿಬಾಯಿಂದ ತತ್‌ಕ್ಷಣದಲಂದು. ॥
ಒಟ್ಟಾಗಿ ಜನರೆಲ್ಲ ನೆರೆದು ಕಾಣಿಕೆಗಳನು
ಕೊಟ್ಟು ಕಂಡರು ಕೆಲರು, ಸಾಷ್ಟಾಂಗವಾಗಿ ಪೊಡ
ಮಟ್ಟು ಕಂಡರು ಕೆಲರು, ಸಂತೋಷದಲಿ ಬಾಯಿಬಿಟ್ಟು ಕಂಡರು ಕೆಲವರು. ॥ ೩೭ ॥

ಬೇಸರದೆ ಆರುವರ್ಷಗಳಿಂದಲೆಡೆಬಿಡದೆ
ಆ ಸ್ವರಾಜ್ಯದ ದೇವತೆಯ ತಪವನಾಚರಿಸಿ,
ಲೇಸಾದ ವರಗಳನು ಪಡೆದು ತಂದನು ತನ್ನ ದೇಶಭಾಂದವರಿಗೆಂದು. ॥
ಈ ಸುಜನವಂದ್ಯ ತಿಲಕನ ಗಾಳಿಯದು ಮೈಗೆ
ಬೀಸಲವನೇ ಧನ್ಯನೆಂದು ಜನರೆಲ್ಲ ಸಂ
ತೋಷದಿಂದೈತಂದು, ನೋಡಿ ಮಾತಾಡಿ, ಕೊಂಡಾಡಿ ಹೋಗುತ್ತಿದ್ದರು. ॥ ೩೮ ॥

ಧರ್ಮಪಾಲನ ನೋಡಬನ್ನಿರಿ, ಸ್ವರಾಜ್ಯದಾ
ಮರ್ಮವನು ತಿಳಿದವನ ನೋಡಬನ್ನಿರಿ, ಮಹಾ
ಶರ್ಮಿಷ್ಠನಾದವನ ನೋಡಬನ್ನಿರಿ, ಗೀತೆ ಎಂಬ ಕ್ಷೀರಾಬ್ಧಿಯಿಂದ ॥
ಕರ್ಮಯೋಗರಹಸ್ಯವೆಂಬ ಮಂದರಗಿರಿಯ
ಕೂರ್ಮೆಯಿಂದ ಜನೋಪಕಾರಕೆನುತೆತ್ತಿರುವ
ಕೂರ್ಮಾವತಾರಿಯನು ನೋಡಬನ್ನಿರಿ, ಎಂಬ ಬೊಬ್ಬೆಯುಬ್ಬರವೆದ್ದುದು. ॥ ೩೯ ॥

ಈ ರೀತಿಯಿಂದ ಬರುತಿಹ ದೇಶಬಂಧುಗಳ
ಸಾರವತ್ತಾದ ಮಾತುಗಳಿಂದ ಮನ್ನಿಸುತ
ಶಾರದಾಧ್ವಜತಿಲಕನಾಮೇಲೆ ತನ್ನ ಕರ್ತವ್ಯವನು ಕೈಕೊಳ್ಳುತ; ॥
ಭಾರತಸ್ವರಾಜ್ಯಸಂಘವ ಮಾಡುತದರಿಂದ
ಕಾರಿಯವ ಸಾಧಿಸುವೆನೆಂಬ ನಿಶ್ಚಯದಿಂದ
ಸಾರಿದನು ಬೆಳಗಾವಿಪಟ್ಟಣವನಲ್ಲಿ ಬೇರೂರುವಾಸಕ್ತಿಯಿಂದ. ॥ ೪೦ ॥

ಬಾಲಗಂಗಾಧರನು ಬರುವನೆಂದೆಂಬುದನು
ಕೇಳುತಲ್ಲಿಯ ಜನರು ಪಟ್ಟಣವ ಸಿಂಗರಿಸಿ,
ಸಾಲುಸಾಲಾಗಿ ಸಂದಣಿಸಿ, ಸರ್ವರು ನೋಡುವಾತುರದಲಿರುತ್ತಿದ್ದರು. ॥

ಆಲಿಸಿರಿ ಮುನಿಗಳಿರ ಹೊಗೆಗಾಡಿ ಬರಲೊಡನೆ
ಹೇಳಲಸದಳವಾದ ಕರತಲಧ್ವನಿಯಲಾ
ಬಾಲವೃದ್ಧರು ಕೂಡಿ, ಜಯಜಯತುಜಯವೆಂದು ಹರಸಿದರು ಹುರುಪಿನಿಂದ, ॥ ೪೧ ॥

ಗಾಡಿಯಿಂದಿಳಿವಾಗ ಕೈಗೊಟ್ಟು ಪುರಜನರು
ಕೂಡೆ ಪಲ್ಲಕಿಯನೇರಿಸಿ ಮೆರವಣಿಗೆಯನ್ನು
ಮಾಡಿಸುತ, ಗೀತವನು ಹಾಡಿಸುತ, ಭಕ್ತಿಯನು ಮೂಡಿಸುತ ಮುಂದೆಬರಲು; ॥
ನೋಡಿದರು ಕಣ್ಣಹಬ್ಬವಿದೆಂದು ಕೆಲರು, ಕೊಂ
ಡಾಡಿದರು, ನಾಲಗೆಯ ಹಬ್ಬವೆನೆ ಕೆಲರು, ಕುಣಿ
ದಾಡಿದರು, ಸಂತಸವಗೂಡಿದರು, ಶಿರವನೀಡಾಡಿದರು ಭಕ್ತಿಯಿಂದ. ॥ ೪೨ ॥

ಹೀಗೆ ಮೆರವಣಿಗೆಯಿಂದಲಿ ಮುಂದೆ ಬರುಬರುತ
ಸ್ವಾಗತವೆನುತ್ತ ಬರೆದಿರುವೊಂದು ವಿಸ್ತಾರ
ವಾಗಿರುವ ಭದ್ರಮಂಟಪದ ಮುಂದಿಳಿಯೆ ಬೆಲೆಯುಳ್ಳ ಪೀತಾಂಬರಗಳ, ॥
ಹೋಗುವ ನಡೆಯ ಮೇಲೆ ಹಾಸಿರಲು, ಜನರು ತಲೆ
ದೂಗುತಿರೆ ನಡೆತಂದು ಸಭೆಯಲಗ್ರಾಸೀನ
ನಾಗಿ ಮೆರೆದನು ತಿಲಕದಂತೆ "ವಂದೇ ಮಾತರಂ" ಘೋಷವೆಲ್ಲೆಲ್ಲಿಯೂ. ॥ ೪೩ ॥

ಶಿಷ್ಟಪದ್ಧತಿಯಂತೆ ಸಭೆಯಲ್ಲಿ ಬಹುಮಾನ
ಪಟ್ಟವರನಾವೇಳೆಯಲಿ ನಾಗರಿಕರು ಕೈ
ಗೊಟ್ಟು ಕರಲಾಘವದಿ "ರಾಜಮಾನ್ಯರೆನುತ್ತ" ಸಂಬೋಧಿಸುತ್ತಬರಲು; ॥
ಶ್ರೇಷ್ಠನೀ ತಿಲಕಗೇನೆನ್ನುವುದೆನುತ ನೆನೆದು
ತಟ್ಟನೀ **ಲೋಕಮಾನ್ಯ**ರು ಎನ್ನುತೊಬ್ಬ ಬಾ
ಯ್ಬಿಟ್ಟುದೇತಡ, ಕರತಲಧ್ವನಿಯ ಘೋಷದಲಿ ಪಟ್ಟಣವೆ ಕಿವುಡಾಯಿತು. ॥ ೪೪ ॥

ರಾಜಮಾನ್ಯತೆ ತಿಲಕಗಿಲ್ಲವೇನಾಯ್ತು? ಸ
ರ್ವೇಜನರು ಮಾನಿಸುವರದರಿಂದಲೀಬಿರುದು
ಸಾಜವಾಗಿರುವುದೆಂದೆಲ್ಲರೂ ಪುಷ್ಪವೃಷ್ಟಿಯ ಕರೆದರಂದಿನಿಂದ, ॥
ಮೂಜಗಕೆ ಲೋಕಮಾನ್ಯರ ಹೆಸರು ಹರಡಿತೆ
ಲ್ಲಾ ಜನರು ಭಾರತಕ್ಕಿವನೇ ಅನಭಿಷಿಕ್ತ
ರಾಜನೆಂದರು; ರಾಜರಾಜರೀರೀತಿಯಲಿ ರಾಜಿಸಿದುದುಂಟೆ ಹಿಂದೆ? ॥ ೪೫ ॥

ರಾಷ್ಟ್ರಕೂಟರು ತಮ್ಮ ಸಾಮರ್ಥ್ಯದಿಂದೆಲ್ಲ
ರಾಷ್ಟ್ರಗಳನೊಂದುಗೂಡಿಸಿ, ಮತ್ತದಕೆ ಮಹಾ
ರಾಷ್ಟ್ರವೆನ್ನುತ ನಾಮಕರಣವನು ಮಾಡಿದರು; ಅದರಿಂದ ಕರ್ಣಾಟಕ, ॥

ರಾಷ್ಟ್ರವೇ ಧಾರಿಣಿಯೊಳಗೆ ನೋಡೆ ಬಹಳ ಉ
ತ್ಕೃಷ್ಟವೆನ್ನುತ ಲೋಕಮಾನ್ಯರು ಅಭಿಪ್ರಾಯ
ಪಟ್ಟರುವ ಕಾರಣದಿ ಕರ್ಣಾಟಕವೆ ಜಗದಿ ಶ್ರೇಷ್ಠತಮವಾಗಿರುವುದು. ॥ ೪೬ ॥

ಕರ್ನಾಡಿನಲಿ ಮೊಳೆದ ದಾರವನು ಹದಮಾಡಿ
ಕರ್ನಾಡದಲಿ ಕಪ್ಪಡವ ಮಾಡಲದರಿಂದ
ತೋರ್ಪುದೇ ಭೇದವೇನಾದರೂ? ಅದರಂತೆ ಮೊದಲು ಕನ್ನಡ ದೇಶದಿ ॥
ಕರ್ಮಾನುಸಾರವಾಗಿಯೆ ಮಾಧವಾಚಾರ್ಯ
ನೊರ್ಮೆ ಮೈದೋರುತೆಚ್ಚರಿಸಿ ಲೋಕವ, ಬಳಿಕ
ಕೂರ್ಮೆಯಿಂದ ಮರಾಠದಲ್ಲುದಿಸಿ ಬೋಧಿಸಿದನಿಷ್ಟರಲಿ ಬಡಿದಾಟವೆ? ॥ ೪೭ ॥

ಕನ್ನಡವು ಬೇರಾಮಹಾರಾಷ್ಟ್ರ ಬೇರೆ, ಎಂ
ದೆನ್ನಲಾಗದು; ಎರಡರಲ್ಲಿಯೊಂದೇ ರಕ್ತ
ವಿನ್ನಾದರೂ ಹರಿಯುತಿದೆ, ಎಂದರಾ ಕನ್ನಡದ ರಕ್ತ ಹರಿಯುತಿಹುದು. ॥
ಇನ್ನು ಭಾಷಾವಿಷಯದಲಿ ಮಹಾರಾಷ್ಟ್ರವದು
ತನ್ನ ಕುಲಗೆಟ್ಟೇ ಮರಾಠಿಯಾಗಿದೆ" ಎಂದು
ಮುನ್ನವೇ ಲೋಕಮಾನ್ಯರು ಹೇಳಿರುವರು, ವಿದ್ಯಾರಣ್ಯಮುನಿಯಲ್ಲವೆ? ॥ ೪೮ ॥

ಅದಕೆ ಸರಿಯಾಗಿಯೇ ನಡೆತಂದು ಕರ್ಣಾಟ
ಕದಿ ಲೋಕಮಾನ್ಯತೆಯನಂಗೀಕರಿಸಿ, ಸ್ವರಾ
ಜ್ಯದ ಸಂಘಕಸ್ತಿಭಾರವ ಹಾಕಿ, ಬಳಿಕ ಮುಂಬಾಪುರಕೆ ತೆರಳುತಲ್ಲಿ; ॥
ಬುಧರ ಜಯಜಯಘೋಷವೇ ಮಂತ್ರಘೋಷ, ಸ್ವಾ
ರ್ಥದ ಹಬ್ಬಗೆಯೆ ಪಶುವು, ತಾನೆ ಯಜಮಾನನೆನೆ
ಒದಗಿಸಿದನಾತ್ಮಯಜ್ಞವನೇನುಧನ್ಯನೋ, ಲೋಕಮಾನ್ಯನು ಲೋಕದಿ! ॥ ೪೯ ॥

ಲೋಕದವರೆಲ್ಲ ಒಗ್ಗಟ್ಟಾಗಿ ನಡೆತಂದು,
ಲೋಕಮಾನ್ಯರ ಪಾದದಲಿ ಲಕ್ಷರೂಪಾಯಿ
ಹಾಕಿ ಕಾಣಿಕೆಯನ್ನು "ನಿಮ್ಮ ಗೃಹಕೃತ್ಯಕುಪಯೋಗಿಸುವುದೆ"ನ್ನಲದಕೆ, ॥
ಲೋಕವೇ ನನ್ನ ಸಂಸಾರವದರಿಂದಲಿದು
ಲೋಕಸೇವೆಗೆ ಬೀಳಲೆಂದು ತುಲಸೀದಳವ
ಹಾಕಿ ನೀರೆರೆದರೇನೆನ್ನಲಿದು ನಿಜವಾದ ತ್ಯಾಗವಲ್ಲವೆ ಲೋಕದಿ? ॥ ೫೦ ॥

ಬಂದಬಂದಲ್ಲಿ ಹಣ, ಹಣವಲ್ಲದಿನ್ನಿಲ್ಲ
ತಂದು ತಂದದ ದೇಶಸೇವೆಗರ್ಪಿಸುವನೇ
ನೆಂದು ಹೇಳುವೆನೆಲ್ಲರಿಗೆ ಬರುವುದೇ ಲೋಕಮಾನ್ಯನೆಂದೆಂಬ ಬಿರುದು? ॥

ಹಿಂದೂ ಮುಹಮ್ಮದೀಯರಲಿರುವ ಭೇದಗಳ
ನಂದಿಸುತ, ಎರಡಾದ ಶಾಂತೋಗ್ರಪಕ್ಷಗಳ
ಒಂದುಗೂಡಿಸಿ, ಮತ್ತೆ ಮೊದಲಿಗಿಮ್ಮಡಿಯಾಗಿ ಸಾಧಿಸಿದನಾತೆರದಲಿ. ॥ ೩೧ ॥

ನಾಟಕವಿದಂತೆ ತೋರದೆ ನೋಡಿದರೆ ತಿಲಕ
ನಾಟ, ಕವಿದಂತೆ ತೋರದೆ? ನೋಡಿಡರೆ ಜಗವ
ನಾಟ ಕವಿದಂತೆ ತೋರದೆ ಬಿಡುವನೇ ನಮ್ಮ ಬಲವಂತರಾಯುಸಿಂದು ? ॥
ನೋಟವೋ, ದೇಶಕಾರ್ಯದಕಡೆಗೆ. ಬುದ್ಧಿಗೇ
ನೋಟವೋ! ದೇಶಕಾರ್ಯದಕಡೆಗೆ ಬುದ್ಧಿಗೇ
ನೋಟ. ವೋ ದೇಶಕಾರ್ಯವೆ! ತನ್ನ ಕರ್ತವ್ಯಕರ್ಮವೆಂದೆನುತಿದ್ದನು. ॥ ೫೨ ॥

ಭರತಖಂಡದಲೆಲ್ಲ ಸಂಚರಿಸಿ, ರಾಷ್ಟ್ರೀಯ
ಪರಿಷತ್ತಿನುದ್ದೇಶವನು ತಿಳಿಸಿ, ತಾನು ನಿ
ರ್ಧರಿಸಿರುವ ಹಿಂದೀಸ್ವರಾಜ್ಯಮಂತ್ರವನೆಲ್ಲ ಭಾರತಕ್ಕುಪದೇಶಿಸಿ; ॥
ಸರುವರೂ ದೇಶಸೇವಾಕಾರ್ಯದಲ್ಲಿ ತ
ತ್ಪರರಾಗುವಂತೆ ಮಾಡುವೆನೆಂಬ ಮನದಿಂದ
ಪರತತ್ವವನೆ ಧ್ಯಾನಿಸುತ್ತಿದ್ದನಂದಾ ಸರಸ್ವತೀಧ್ವಜತಿಲಕನು. ॥ ೫೩ ॥

ಐದನೆ ಸಂಧಿ ಸಂಪೂರ್ಣ.

**ಸಂಧಿ ಐದಕ್ಕೆ ಪದ್ಯ. ೧೮೫.**

---

# ಆರನೆ ಸಂಧಿ.

**ಸೂಚನೆ:**

ಭಾರತವೆ ತನ್ನ ಮನೆ ಎಂಬ ಮನದಿಂದೆಲ್ಲ
ಭಾರತೀಯರ ಮನುಷ್ಯರನಾಗಿ ಮಾಡಿದನು
ಭಾರತೀಧ್ವಜತಿಲಕನಂದು ಲೇಖನ ಭಾಷಣಾದಿಗಳ ಮುಖದಿಂದಲಿ. ॥

ಬಾಲಗಂಗಾಧರನ ಸೂಕ್ತಿಯೆಂದೆಂಬಾ ವಿ
ಶಾಲವಾಗಿರುವ ಕ್ಷೀರಾಬ್ಧಿಯನು ಮಥಿಸುತ್ತ
ಮೇಲೆತ್ತಿ ತೆಗೆದ ನವನೀತವಿದು, ನಿಮ್ಮ ಕಿವಿಯಿಂದಲಿದನುಣ್ಣಿಸುವೆನು. ॥
ಕೇಳುವೀ ನಿಮ್ಮ ಭಾಗ್ಯಕೆ ಸಾಟಯಿಲ್ಲ, ಇದ
ಹೇಳುವೆನ್ನಯ ಪುಣ್ಯಕೆಣೆಯಿಲ್ಲವದರಿಂದ
ಲಾಲಿಸುವುದಿನ್ನು ಕಿವಿಗೊಟ್ಟದನು ಶೌನಕರೆ! ತಿಲಕಸಂದೇಶವನ್ನು. ॥ ೧ ॥

ಕಡಿದು ಕಟ್ಟವು ನೀರು ಹೊರಡಲಾರಂಭಿಸಲು
ತಡೆದು ನಿಲ್ಲಿಸಲು ಸಾಧ್ಯವೆ? ಗತಿಗೊಡುವ ಚಕ್ರ
ಹಿಡಿದು ನಿಲಿಸಲಿಕಹುದೆ? ಮಾನವೀವರ್ಗಕ್ಕೆ ಜನ್ಮಸಿದ್ಧವು ಎನಿಸಿದ ||
ಒಡೆದು ತೋರುವ ಹಕ್ಕುಗಳನಿನ್ನು ನಮ್ಮಿಂದ
ಅಡಗಿಸುವರಾರು? ಹಿಂದೀ ಸ್ವರಾಜ್ಯದ ಗುರಿಗೆ
ಎಡರಾಗದಿನ್ನು ಸರ್ವೇಸಮುಸ್ತರಿಗರಿವು ಹುಟ್ಟಿರುವ ಕಾರಣದಲಿ. || ೨ ||

ಏರಿಗಿಳಿ, ಇಳಿಗೇರು ಕಾರಣವು; ಪೂರ್ವದಲಿ
ಯಾರು ಸರಿಯಾಗಿದ್ದರೀ ಭಾರತೀಯರಿಗೆ?
ಸೂರೆಯಾಯಿತು, ಬಿದಿರು ಕಟ್ಟೆಹೋದಂತಾಗಿ ಸರ್ವವೂ ನಾಶವಾಯ್ತು. ||
ತೋರುತಿದೆ ಈಗ ನಮ್ಮಭ್ಯುದಯಕಾಲ; ಇದ
ಮಿಾರದಿರಿ ಜೋಕೆ, ತೆರೆಬರುವಾಗ ತಲೆಯೊಡ್ಡಿ.
ಬೇರೆ ಸಮಯಗಳಿಲ್ಲ, ತೆರೆನಿಂತು, ಆ ಮೇಲೆ ಸ್ನಾನವನು ಮಾಡಲುಂಟೆ? || ೩ ||

ಕ್ಷುಬ್ಧವಾತಾವರಣವಾಗಿರುವುದೀಗ ನಾ
ಲ್ಕಬ್ಧಿಗಳ ಹೊರಗೊಳಗಿರುವ ಎಲ್ಲ ದೇಶಗಳು;
ಸ್ತಬ್ಧರಾಗಿರದೆ, ನಾವೆಲ್ಲರೊಂದಾಗೀಗ ಕಾರ್ಯಸಾಧಿಸದಿದ್ದರೆ, ||
ಶಬ್ದದಲಿ ಬಂದ ಹಿಂದಿಗಳೆಂಬ ಹೆಸರಿದು ಶ
ತಾಬ್ದವಾದರು ನಮಗೆ ಮಾಜದಾದುದರಿಂದ
ಲುಬ್ಧರಾಗದೆ ಸ್ವಾರ್ಥದಲಿ, ದೇಶದೇಳಿಗೆಗೆ ಸೊಂಟಗಟ್ಟುವುದೆಲ್ಲರು. || ೪ ||

ಬಂದಸಂಕಟವು ಬರುವಾರೋಗ್ಯ ಸೂಚಕವು,
ಬಂದ ಬಡತನವು ಬಹ ಸೌಭಾಗ್ಯ ಸೂಚಕವು,
ಬಂದಿಹ ವಿಪತ್ತು ಬರಲಿರುವ ಸಂಪತ್ತನ್ನು ತಿಳಿಸಲಿಕ್ಕಿಹ ಸೂಚನೆ. ||
ಎಂದು ತಿಳಿಯಲು ಬೇಕು; ಕಾರಣವದೇನೆನಲು —
ಕುಂದಣವ ಬೆಂಕಿಯಲಿ ಕಾಯಿಸುತ ಬಡಿಯಲದು
ಸುಂದರಾಕೃತಿಯ ಸೌವರ್ಣವನು ತಾಳದೇ, ದಂದುಗಕೆ ಹಿಂದೆಗೆವುದೆ? || ೫ ||

ಅವರವರ ತಲೆಯುಡಿಗೆ ಅವರವರ ಕೈಯೆಂದು
ಭುವನವಿದಿತವು; ಹಾಗೆ ನಮ್ಮೇಳಿಗೆಗೆ ನಾವು
ತವಕಿಸಿ ಶತಪ್ರಯತ್ನವ ಮಾಡದಿದ್ದರದು ಹೇಗೆ ಕೈಗೂಡಬಹುದು? ||
ಅವರವರೆನಲು "ಬೇರೆಬೇರೆ" ಎಂದೆಣಿಸದಿರಿ,
ಕವಲುಮನವನು ಮಾಡಬಾರದೀ ಸಮಯದಲಿ,
ವಿವರಿಸುವೆನೊಂದು ಮಾತುಂಟು "ಕಲಿಯುಗದಲ್ಲಿ ಸಂಘದಲಿ ಶಕ್ತಿ" ಎಂದು. || ೬ ||

ಸಂಘದಲಿ ಬಲವುಂಟು, ಸಂಘದಲಿ ಕಲೆಯುಂಟು,
ಸಂಘದಲಿ ಕಾರಣಿಕವುಂಟು, ಸರ್ವವು ಉಂಟು,
ಸಂಘವೇ ಕಲಿಯುಗದಿ ಸರ್ವಾರ್ಥಸಾಧನಕೆ ಮೂಲವಾಗಿರುವ ಗಂಟು. ||
ಸಂಘವೇ ಪಾಶ್ಚಾತ್ಯರೇಳಿಗೆಯ ಕಾಲ. ಆ
ಸಂಘವೇ ಜಾಪಾನರುನ್ನತಿಯ ಮೂಲವೆನೆ,
ಸಂಘವೇ ನಮಗಾದರಭಿವೃದ್ಧಿಕೊಡುವುದೆಂದರಿತುಕೊಳ್ಳುವುದು ನಾವು. || ೭ ||

ಅದರಿಂದ ಅವರವರೆನಲು ತಿಳಿದುಕೊಳ್ಳುವುದು,
ಅದದು ರಾಷ್ಟ್ರಗಳು, ಆಯಾ ದೇಶಗಳು ಎಂದು,
ಅದರಂತೆ ಮಾಡಿದರೆ ನಾವಾದರೂ ಏಳಿಗೆಯ ಹೊಂದಬಾರದೇಕೆ? ||
ಹದಗೈದು ಮದ್ದೆಂದು ಕಹಿಯ ಕೊಡುವರು ಕೆಲರು,
ಅದನು ಕುಡಿಯಲಿಕಾರು, ನಾವೆಂದು ತಿಳಿದಿರೇ?
ಬದಲೇನು, ನಮ್ಮ ನಾವೇನಂಬದಿರೆ, ಬೇರೆಯವರು ನಂಬುವರೆ ಮತ್ತೆ? || ೮ ||

ನಮ್ಮ ದೇಶದಿ ಹುಟ್ಟಿ, ನಮ್ಮ ದೇಶದಿ ಬಳೆದು,
ನಮ್ಮ ದೇಶದ ನೀರು ಕೂಳುಗಳ ಕುಡಿದುಂಡು,
ನವಿಶ್ಮಾ ಸುವರ್ಣಭೂಮಿಯ ಮಕ್ಕಳೆಂದೆನಿಸಿ, ಸತ್ವಗುಣದಿಂದ ಬೆರಸಿ; ||
ನಮ್ಮವರು ನಾವಾಗಿ, ದುಷ್ಟರಿಗೆ ಕಿವಿಗೊಟ್ಟು,
ನಮ್ಮಲೊಡಕನುತಹುದು ಸರಿಯೆ, ಸಮ್ಮತವೆ? ನಾ
ವ್ನಮ್ಮಲನ್ಯೋನ್ಯ ಹೆಚ್ಚಿಸುವುದೇ ಮೊದಲನೆಯ ಕೆಲಸವಾಗಿಹುದು ನೋಡಿ. || ೯ ||

ವಿದ್ಯಾಪ್ರಚಾರ ನಮ್ಮಲ್ಲಾಗಬೇಕೆಂದು
ಎದ್ದು ಹೆಣಗಿದರಾರು? ನಮ್ಮವರು. ಕೂಲಿಗಳಿ
ಗಿದ್ದ ಕಷ್ಟವನು ಪರದೇಶದಲಿ ನೀಗಿಸಿದರಾರು? ನಮ್ಮವರು. ನಮ್ಮ ||
ಬಿದ್ದಹಕ್ಕುಗಳನೆತ್ತಲು ಯತ್ನಿಸಿದರಾರು?
ಉದ್ದಾಮಗುಣದ ನಮ್ಮವರದಕೆ ಮಸಿಬಳಿಯ
ಲಿದ್ದವರ ತಾಳಕ್ಕೆ ತಕ್ಕಂತೆ ಕುಣಿವುದೇ? ಮುಖದಿ ಸುಣ್ಣವ ಬರೆವುದೆ? || ೧೦ ||

ಎಲ್ಲಕೆಲಸಕ್ಕು ನಂಬಿಕೆಯೆ ಮೂಲಾಧಾರ,
ಎಲ್ಲ ನಂಬಿಕೆಗು ಮೂಲವು ನೋಡೆ ಸಹಕಾರ,
ಎಲ್ಲ ಸಹಕಾರಕ್ಕು ಮೂಲವಾ ದೇಶಾಭಿಮಾನವೆಂದೆಂಬಸಾರ, ||
ಎಲ್ಲ ದೇಶಾಭಿಮಾನಕು ಜ್ಞಾನಸಂಚಾರ,
ಎಲ್ಲ ಜ್ಞಾನಕು ಮೊದಲು ವಾಚನವಿಚಾರ, ಹೀ
ಗೆಲ್ಲ ವಾಚನಕು ಕಾರಣವಾಗಿರುವುದು ಪ್ರಾಥಮಿಕ ವಿದ್ಯಾಪ್ರಚಾರ. || ೧೧ ||

ಎಲ್ಲೆಲ್ಲಿ ವಿದ್ಯಾಪ್ರಚಾರವಾಗಿರುತಿಹುದು?
ಅಲ್ಲಲ್ಲಿ ದೇಶವೇಳಿಗೆಯನ್ನು ಹೊಂದಿಹುದು.
ಇಲ್ಲಿ ವಿದ್ಯಾಭಿವೃದ್ಧಿಗೆ ತಕ್ಕ ಪ್ರೋತ್ಸಾಹವಿಲ್ಲ, ಅಭಿವೃದ್ಧಿಯಿಲ್ಲ. ॥
ಸೊಲ್ಲಿಸುವರಿದಕೆ ಬ್ರಾಹ್ಮಣರು ವಿದ್ಯೆಯನು ತ
ಮ್ಮಲ್ಲಿ ಮಾತ್ರವೆ ಇಟ್ಟುಕೊಂಡರೀತೆರದಿಂದ
ಕಲ್ಲು ಹಾಕಿದರೆಂದು; ಇದು ಸಯುಕ್ತಿಕವಲ್ಲ, ಇದಕೆ ಕಾರಣವಿರುವುದು. ॥ ೧೨ ॥

ಆದಿಕವಿ ವಾಲ್ಮೀಕಿಯಾರು? ಮಾದಿಗನವನು.
ಭೂದೇವರೊಡೆಯನು ವಸಿಷ್ಠನೂರ್ವಶಿಸುತನು.
ಆದ ಹಳೆಮಾತೇಕೆ? ರಾಮಾನುಜಾಚಾರ್ಯನೆಂಬವನು ಹೊಲೆಯರನ್ನು, ॥
ಆದರಿಸಿ ಆಳ್ವಾರರೆಂದು ತಮ್ಮಲಿ ಕೂಡಿ,
ಭೇದವಿಲ್ಲದೆ ಉದ್ಧರಿಸನೆ? ಗುರುಕುಲದಿ ಈ
ಗಾದರೂ ಮೇಲೆತ್ತರೇ? ಯೋಗ್ಯತೆಯೆ ಮೇಲು, ಅಲ್ಲದಿರೆ ಕೀಳುನೋಡಿ. ॥ ೧೩ ॥

ಸುಮ್ಮನೇತಕೆ ಬೇರೆಯುವರ ದೂಷಣ? ನಾವು
ನಮ್ಮ ಯೋಗ್ಯತೆಯ ಹೆಚ್ಚಿಸಿಕೊಂಡರಲ್ಲವೇ
ಸನ್ಮಾನ ದೊರಕುವುದು? ಅವರಿವರ ಹಾಗೆ ಹೀಗೆಂದೆನಲು ಏನು ಫಲವು? ॥
ಚರ್ಮಕಿಹುದೇನು ಬಿಳಿಕರಿದೆಂದು ಮರ್ಯಾದೆ?
ಕರ್ಮವಲ್ಲವೆ ನಮ್ಮ ಯೋಗ್ಯತೆಗೆ ಕೈದೀಪ?
ಧರ್ಮಕ್ಕೆ ನಾವೆ ಮೊದಲಿಗರು, ಬೇಕಾದುದೇ ಕರ್ಮಯೋಗವು ನಮ್ಮಲಿ. ॥ ೧೪ ॥

ಹುಟ್ಟುಭಾಷೆಯಲಿ ಶಿಕ್ಷಣವನ್ನು ಕೊಡಬೇಕು,
ಕಷ್ಟವಾದರೆ ದೇಷಭಾಷೆಯಲಿ ಕೊಡಬಹುದು,
ರಾಷ್ಟ್ರಕೊಂದೇ ಭಾಷೆಯಾಗಬೇಕೆಂಬುದದು ಸರಿ; ಆದರಾಭಾಷೆಯು ॥
ಹುಟ್ಟುಮೊದಲಾಗಿ ಕೇಳದ ಭಾಷೆಯಾಗಿರದೆ,
ಕಷ್ಟವೆಂದಾರಿಗೂ ಆಗಬಾರದು, ಮತ್ತು
ರಾಷ್ಟ್ರದಲಿ ಸಾಮಾನ್ಯವಾಗಬೇಕಿದು "ಮಹಾತ್ಮಾಗಾಂಧಿ" ಎಂಬ ಮತವು. ॥ ೧೫ ॥

ಸತ್ಯಾಗ್ರಹವ ಹಿಡಿದು ದಕ್ಷಿಣಾಫ್ರಿಕದಲ್ಲಿ
ಎತ್ತಿಹಿಡಿದನು ಹಿಂದಿಗಳನಿವನು, ಆ ಮೇಲೆ
ಬಿತ್ತಿದನು ಸರ್ವತ್ರ, ಅದುವೆ ನಿಃಶಸ್ತ್ರಪ್ರತೀಕಾರವೆಂದೆಂಬುದು. ॥
ಮತ್ತೆ ಮೊಳೆಯಿತು ಲೋಕಲೋಕದಲ್ಲೆಲ್ಲ, ಬೆಳ
ಗಿತ್ತದನು ತಡೆಯುವವನರಾರು? ಈತನೆ ನೋಡೆ
ಅತ್ಯಧಿಕ ದೇಶಭಕ್ತರ ಶಿರೋಮಣಿ, ಪ್ರಜಾಸತ್ತೆಯೇ ಇವನ ಗುರಿಯು. ॥ ೧೬ ॥

ಬಳಿಕ ಗೊಖಲೆ ಮಾಲವೀಯ ಥಾಗೂರಾದಿ
ನೆಲದಗಲದಲಿ ಹೆಸರುಗೊಂಡ ಮುಂದಾಳುಗಳು
ತಿಳಿಸಲಿಲ್ಲವೆ, ನಮ್ಮ ದೇಶಭಾಷೆಯ ಶಿಕ್ಷಣವೆ ನಮಗೆ ಬೇಕೆನ್ನುತ? ॥
ಅಳಿದರೀ ದೇಶಭಾಷೆಯು ಭರತಖಂಡದಲಿ,
ಉಳಿವುದೇ ನಮ್ಮ ಹಿಂದೀ ಜನಾಂಗದ ಹೆಸರು?
ತಿಳಿದವರ ಮತ ದೇಶವೆಂಬ ದೇಹದಿ ದೇಶಭಾಷೆಯೇ ಉಸಿರೆನ್ನುತ. ॥ ೧೭ ॥

ದೇಶಭಾಷೆಗಳನಳಿಸಲಿಕಾಗಿ ನವ್ಯಾಂಗ್ಲ
ಭಾಷೆಯನು ಹಬ್ಬಿಸುವುದದರಿಂದ ಹಿಂದಿಗಳ
ದೇಶೀಯಸಂಸ್ಕೃತಿಯು ಕೆಡುವುದಾಮೇಲೆಲ್ಲರನು ಕೈಸ್ತರಾಗಿ ಮಾಡೆ; ॥
ಲೇಸಾಗಿ ಭರತಖಂಡವು ಬಳಿಕ ನಮ್ಮ ಉ
ದ್ದೇಶದಂತಮರುವುದು ಮುಷ್ಟಿಯಲಿ; ಇಲ್ಲದಿರೆ
ಆಶೆ ಬೇಡೆನ್ನುತ ಮೆಕಾಲೆ ಎಂಬವನು ತಂದೆಗೆ ಪತ್ರಬರೆದಿರುವನು. ॥ ೧೮ ॥

ಉಸಿರುಕಟ್ಟಸಿ ಹೆಣವ ಮಾಡಿ, ಆ ಮೇಲದಕೆ
ಹೊಸಗಾಳಿ ತುಂಬಿಸುತ ನಡೆಯಿಸುವ ಒಂದು ವಿಧ
ಕುಶಲವಿದ್ಯೆಯೆ, ದೇಶಭಾಷೆಗಳನೊರಸಿ ಪರಭಾಷೆಯನು ಹಬ್ಬಿಸುವುದು. ॥
ಉಸಿರುವುದೆ ಅದು ಸಜೀವಿಗಳಾದ ನಮ್ಮಂತೆ?
ಅಸುವಡಗಲದು ಬರಿಯ ಕಟ್ಟಿಗೆಯ ಬೊಂಬೆ, ಅದ
ಕೆಸೆಯುವಾ ಸ್ವಮತವೆಂದುಂಟೆ? ಭಾಷೆಗೆ ದೋಷಬರಲು ಗತಿ ಎಂಬುದುಂಟೆ?॥ ೧೯ ॥

ರಾಷ್ಟ್ರಭಾಷೆಯ ಮುಂದೆ ತಂದು ಅದರಿಂದಲೇ
ರಾಷ್ಟ್ರೀಯಶಿಕ್ಷಣವ ಕೊಡಬೇಕು; ಇಲ್ಲದಿರೆ
ಎಷ್ಟು ಕಲಿತರು ನಮಗೆ ಪರಸೇವೆಯಲ್ಲದಿನ್ನೊಂದಿಲ್ಲ ಗತಿ ನೋಡಲು; ॥
ಅಷ್ಟಕಷ್ಟಿರಬೇಕು ಪರಭಾಷೆ ಇಂಗ್ರಜಿ, ಕ
ನಿಷ್ಟದಶೆಯಲಿ ಓದಿಬರೆದು ನುಡಿಯಲು ಬಂದ
ರಷ್ಟೇ ನಮಗೆ ಸಾಕು, ಅದು ರಾಜಭಾಷೆಯಾಗಿದ್ದಕಾರಣದಿಂದಲಿ. ॥ ೨೦ ॥

ತನ್ನ ಮನೆಕೆಲಸಗಳ ತಾನೆ ಮಾಡುವುದೊಂದು,
ಅನ್ಯರಿಂದಲಿ ಮಾಡಿಸುವುದೊಂದು, ಇವುಗಳಲಿ
ಮಾನ್ಯವಾವುದು? ಪರಾಪೇಕ್ಷೆಯಿಂದೆಷ್ಟು ದಿನ ಕಾಲಹರಣವ ಗೈವುದು? ॥
ತನ್ನ ಕಾಲಿನಲಿ ನಡೆಯಲು ಬೇಕು ತಾನು; ಹೊರ
ತನ್ನಿಗರ ಕಾಲಿಂದ ನಡೆಯಲಾಗುವುದೆ? ಏ
ನೆನ್ನುವಿರಿ ಇದಕೆ? ಅದರಿಂದಲೇ ದೇಶಭಾಷೆಯ ಶಿಕ್ಷಣವೆ ಮುಖ್ಯವು. ॥ ೨೧ ॥

ಭಾಷೆಯೆಂದೆನಲು ಒಬ್ಬನ ಮನಸ್ಸಿನಲಿರುವ
ಆಶಯವನಿನ್ನೊಬ್ಬನಿಗೆ ತಿಳಿಸಲಿಕ್ಕಿಹ ವಿ
ಶೇಷವಾದೊಂದು ಸಂಕೇತವಲ್ಲದೆ, ಅದರಲೇನುಂಟು ತಿಳಿದು ನೋಡೆ? ||
ಭಾಷೆಯದು ಹಾಳು, ಇದು ಸಾರವಿಲ್ಲೆಂದೆನುತ
ದೂಷಿಸುವುದೇಕೆ? ನಳಿಗೆಯಲಿ ನೀರೊಸರುಂಟೆ?
ಭಾಷೆಯಲ್ಲಿಲ್ಲ ಸಾರಾಸಾರ; ವಿಷಯದಲ್ಲೆಂಬುದನು ತಿಳಿಯಬೇಕು. || ೨೨ ||

ನಾಡನುಡಿಯಿಂದಲೇ ಕಲಿಸಿದರೆ, ಅದು ನಮಗೆ
ಬೇಡವೆಂದರು ತನಗೆ ತಾನಾಗಿ ಬಂದು ತಲೆ
ಗೋಡುವುದು, ಅದರಿಂದ ಸಾಮಾನ್ಯರಲ್ಲಿಯೂ ತಿಳಿವು ಮೊಳೆದೋರದಿರದು. ||
ಆಡುಮಾತಿಂದಲೇ ಪಾಶ್ಚಾತ್ಯರಾದರೂ
ರೂಢಿಸಿದರವರವರ ಶಾಸ್ತ್ರಗಳ ಗ್ರಂಥಗಳ,
ನೋಡಿದರು ಸಾಮಾನ್ಯರೂ ಕೂಡ, ಅದರಿಂದ ಮಾಡಿದರು ಸಾಹಸವನು. || ೨೩ ||

ಒಂದು ದೇಶದಲೊಬ್ಬರಿಬ್ಬರು ಸುಶಿಕ್ಷಿತರು
ಮುಂದೆ ಬಂದರೆ ಅವರು ಮಾಡಲೇನಿಹುದು? ಅವ
ರಿಂದಲೇನಾಗುವುದು? ಸರ್ವೇಸಮಸ್ತರು ಸುಶಿಕ್ಷಿತರು ತಾವಾದರೆ, ||
ಅಂದಿಗಿಷ್ಟಾರ್ಥ ಸಂಸಿದ್ಧಿಯಾಗುವುದದಕೆ
ಒಂದೇ ಉಪಾಯ, ಶಿಕ್ಷಣವ ದೇಶೀಭಾಷೆ
ಯಿಂದಲೇ ಕೊಡುವುದಿದ ಬಿಡಲೆರಡನೆಯುಪಾಯವೆಲ್ಲಾ ಅಪಾಯ ನಮಗೆ. || ೨೪ ||

ಇದರಿಂದ ವಿಷಯವಿಜ್ಞಾನವಾಗುವುದು, ಮ
ತ್ತಿದರಿಂದ ದೇಶಾಭಿಮಾನ ಬರುವುದು, ಬರಲು
ವಿಧವಿಧ ಮಹತ್ವದಾಕಾಂಕ್ಷೆಗಳು ತೋರುವುವು, ಇದುವೆ ಅಭಿವೃದ್ಧಿಹೇತು. ||
ಇದನೆಲ್ಲ ಭಾರತೀಯರು ತಿಳಿದ ದಿವಸವೇ
ಒದಗಿತು ಸ್ವರಾಜ್ಯವೆಂಬುದಕೆ ಸಂಶಯವಿಲ್ಲ,
ಇದಕೊಂದು ಕಷ್ಟವೇ? ಒಬ್ಬೊಬ್ಬನೊಬ್ಬೊಬ್ಬನನು ತಯಾರಿಸಲಾಯಿತು. || ೨೫ ||

ಬಂದಿರುವುದಿದರಲ್ಲಿ ಫಲವೆಂದು ಬಿಟ್ಟದನು
ತಂದ ಗೊಬ್ಬರವ ಹಡಿಲಿನ ಹೊಲಕೆ ಹಾಕೆ, ಅದ
ರಿಂದ ಫಲವತ್ತಾದ ಭೂಮಿ ಕೆಡದಿಹುದೆ? ಅದು ತಪ್ಪೆಣಿಕೆ; ಅದರಂದದಿ ||
ಹಿಂದುಳಿದವರನುದ್ಧರಿಸುವ ನೆವದಿಂದ, ಈ
ಮುಂದುವರಿದವರನ್ನು ಮುರಿದಿಡುವ ಯತ್ನವನು
ತಂದಿರುವರಿದು ಶ್ಲಾಘನೀಯವೆಂತಾಗುವುದು? ಸಮದೃಷ್ಟಿಯಲಿ ನೋಡಿರಿ. || ೨೬ ||

ಉದ್ಧರಿಸಬೇಕು ಹಿಂದುಳಿದವರನೆಂಬುದಿದು
ಸಿದ್ಧವಾಗಿಹಮಾತು; ಆ ಸಮಯದಲ್ಲಿ ಮೊದ
ಲಿದ್ದವರ ಮೂಲೆಗೊತ್ತುವುದೆಂದರಿದು ದೇಶಹಿತವಿಘಾತಕವಲ್ಲವೆ? ||
ಬಿದ್ದು ಹೋದರೆ ಜನಾಂಗದ ರುಂಡವಾಮೇಲೆ
ಸದ್ದಿಲ್ಲದಾ ಮುಂಡವೇನು ಹಿತ ಮಾಡುವುದು?
ಉದ್ದಾಮವಾಗಿ ಸರ್ವತ್ರ ಶಿಕ್ಷಣವಾಗಬೇಕೆಂದರಾರು ನಮಗೆ? || ೨೭ ||

ಕಡ್ಡಾಯವಾಗಿ ಶಿಕ್ಷಣವು ಬೇಕೆಂದು, ಇದಿ
ರೊಡ್ಡಿ ನಿಂದವನು ಗೋಖಲೆಯಲ್ಲವೇ? ಅದಕ
ಸಡ್ಡೆ ಮಾಡಿದರಾರು? ನಿಮ್ಮ ಹುರಿದುಂಬಿಸುವ ಶಕುನಿಗಳು ತಿಳಿದಿರೇನು? ||
ಅಡ್ಡಬಂದೀ ಜಾತಿಭೇದವೇ ದೋಷವೆಂ
ದೊಡ್ಡುವರು, ಜಾತಿಗೊಂದೊಂದು ಸಭೆ ಬೇಕೆಂದು
ಮಡ್ಡತನದಿಂದ ಪೂರ್ವಾಪರವಿರೋಧವಾಡುವರು ನೋಡಿರಿ ಸ್ವಾರ್ಥದಿ. || ೨೮ ||

ಇದರಿಂದ ಬ್ರಾಹ್ಮಣರ ಹೊಗಳಿ, ಅಬ್ರಾಹ್ಮಣರಿ
ಗಿದಿರಾಡುವೆವು, ಎಂದು ನೆನಸದಿರಿ ಮನದಲ್ಲಿ,
ಇದು ನಾಡನುಡಿ "ಮುಡಿಗೆ ಮೂರು ಬಳ್ಳವು ಜಳ್ಳು" ಅದು ಹಾರಿ ಹೋಗದಿರದು. ||
ಅದರಂತೆ ಪ್ರತಿ ಜನಾಂಗಗಳಲ್ಲಿಯೂ ಕೆಲವ
ರಿದಿರಾಗುವರು ದುಷ್ಟರದಕಾಗಿ ನಮ್ಮೊಳಗೆ
ಕದನವನು ಮಸೆಯ"ಲಿಬ್ಬರನ್ಯಾಯ ಮೂರನೆಯವನಿಗಾಯ"ವಾಗದಿಹುದೆ? || ೨೯ ||

ಕನ್ನಡಿಯ ನೋಡಿ ಮೋರೆಯ ತಿದ್ದಿಕೊಳುವಂತೆ
ಅನ್ಯದೇಶೀಯರ ಮಹತ್ವವನು ನೋಡಿ, ನಾ
ವಿನ್ನಾದರೂ "ಬೇರೆಬೇರೆ" ಎಂದೆನದೆ ಬ್ರಾಹ್ಮಣ ಬ್ರಾಹ್ಮಣೇತರರಲಿ; ||
ಅನ್ಯೋನ್ಯವನು ಬಳೆಯಿಸುವುದು, ಅದರಿಂದಲೇ
ಉನ್ನತಿಯ ಹೊಂದುವುದು, ಆಮೇಲೆ ನಾವೆ ನ
ಮ್ಮನ್ನಾಳುವಾ ಪ್ರಜಾಸತ್ತೆ ಬರುವುದು, ಅದು ಮಹತ್ವವಾಗಿಹ ವಿಷಯವು. || ೩೦ ||

ಕಷ್ಟಪಡುವುದೆ ನರಕಕೂಪವೆಂದುಸುರುವರು,
ಇಷ್ಟತುಷ್ಟಿಯೆ ಸ್ವರ್ಗಪದವೆಂದು ಹೇಳುವರು,
ಇಷ್ಟೆ ಕಲಿಯುಗದ ಸಾಮಾನ್ಯಜನರಲ್ಲಿಯೂ ನೆಟ್ಟು ಬೇರೂರಿರುವುದು. ||
ಅಷ್ಟಾದರೂ ನಮಗೆ ಸಿಕ್ಕಬೇಕಾದರಾ
ಶ್ರೇಷ್ಠವಾಗಿಹ ಸ್ವರಾಜ್ಯದ ಹೊರತು ಬೇರಿಲ್ಲ,
ನಿಷ್ಠೆಯಿಂದಲಿ ಸಾಧಿಸಿದರೆ ಸಬಳವನಾದರೂ ನುಂಗಬಹುದಲ್ಲವೆ? || ೩೧ ||

ಎಲ್ಲರೊಂದಾದ ಮರುದಿವಸವೇ ಬಂತು ನಮ
ಗಿಲ್ಲಿಗೆ ಸ್ವರಾಜ್ಯ; ಇದಕೆರಡೆಣಿಕೆಯಿಲ್ಲ, ನ
ಮ್ಮಲ್ಲಿ ಹಲವರು ಮೇಲಕೆಳೆವಾಗ, ಕೆಲರು ನೀರಿಗೆ ಎಳೆವ ತೆರನಾದರೆ; ||
ಅಲ್ಲಿ ಕರಟಕದಮನಕರ ಭೀತಿ ತಗಲುವುದು,
ಎಲ್ಲವೂ ಕನ್ನಡಿಯ ಗಂಟಾಗಿ ಹೋಗುವುದು,
"ಕಲ್ಲುಕಂಡಲ್ಲಿ ಹಾರೆಯನಿಡುವುದೆ"ಂಬಂತೆ ಕೊಡುವವರು ಹಿಂದೆಗೆವರು. || ೩೨ ||

ಮುಂದಿದ್ದ ಹೆಜ್ಜೆಯನು ಹಿಂದೆಗೆವರಲ್ಲೆಂದು
ಅಂದಿನಿಂದಲೆ ಭಾರತೀಯರಿಗೆ ಬಿರುದುಂಟು,
ಇಂದಿಗದ ಬಿಡೆ, ಮಾನಹಾನಿಯಲ್ಲದೆ ನಮ್ಮ ಅಭಿವೃದ್ಧಿಗೆಡರುಬಹುದು. ||
ಹಿಂದಿದ್ದ ನಮ್ಮ ವೈಭವಗಳೆಲ್ಲವ ತಿಳಿದು,
ಇಂದಿಗೊದಗಿದ ದುರ್ದಶೆಯ ಕೊಳೆಗಳನು ತೊಳೆದು
ಮಿಂದು, ರಾಷ್ಟ್ರೀಯಜಪವನು ಮಾಡುತಾ ಸ್ವರಾಜ್ಯದ ತಿಲಕವನ್ನಿಡುವುದು. || ೩೩ ||

ನರಕದಲಿ ಹುಟ್ಟಿರುವ ಜಂತುಗಳಿಗದೆ ಸ್ವರ್ಗ
ಕೆರಕವಾಗುವುದು; ಹಾಗೆಯೆ ಕೆಲರು ನಮ್ಮಲ್ಲಿ
ಇರುವರವರಿಗೆ ಪರರ ಸೇವೆಯೇ ಪರತರ ಪರಬ್ರಹ್ಮವಾಗಿರುವುದು. ||
ಕುರಿಯ ಹಿಂಡಿನಲಿ ಸಿಂಹದ ಮರಿಯ ಸಾಕಿದರೆ,
ಅರಿವುದೇ ತಾನು ಮೃಗಪತಿ, ಎಂದು ಮೊದಲು? ಆ
ತೆರನಾಗಿರುವರವರು; ತಮ್ಮಯ ನಿಜಸ್ಥಿತಿಯ ತಾವರಿಯದಾಗಿರುವರು. || ೩೪ ||

ಒಳ್ಳೆದಕ್ಕೊಂಬತ್ತುವಿಘ್ನ; ಎಂಬಾಮಾತು
ಸುಳ್ಳಲ್ಲ; ಹಿಂದಕರ್ಜುನನಿಂದ್ರಕೀಲದಲಿ
ನಿಲ್ಲನೇ ಹರನ ಮೆಚ್ಚಿಸಿ ಪಾಶುಪತವನ್ನು ಪಡೆಯಬೇಕೆಂದೆನ್ನುತ? ||
ಅಲ್ಲಿ ಹರನೇ ಶಬರವೇಷದಲಿ ಬಂದವನ
ಕಲ್ಲೆದೆತನವ ಪರೀಕ್ಷಿಸಲೆಂದು ಹೋರಾಡಿ,
ಸಲ್ಲಿಸನೆ ಕಡೆಗವನ ಮನದಿಷ್ಟಗಳನೆಲ್ಲ? ಅದರಂತೆ ಇಲ್ಲಾದರು. || ೩೫ ||

ಇವನು ರಾಜದ್ರೋಹಿ, ಇವನು ದೇಶದ್ರೋಹಿ,
ಇವನು ಲೋಕದ ಶಾಂತತೆಗೆ ಭಂಗತರುವವನು,
ಇವನುಗ್ರಪಕ್ಷದವನೀತೆರದಲೊಂದೊಂದು ನೆವಗಳನ್ನೊಡ್ಡಿ ಹಿಡಿದು; ||
ಅವನವನ ಮೇಲೆ ತಪ್ಪಿನ ಹೊರೆಯ ಹೊರಿಸುತ್ತ,
ಜವದಿಂದ ಕಾರಾಗೃಹದಲಿಡುವರಿದು ಹಿಂದೆ
ವಿವರಿಸಿದ ವಿಘ್ನರೂಪಗಳು; ಹೊರೆಯಿಡೆ ಮೊದಲು ಕೊರಳಬಲ ನೋಡುತಿಹರು. ||೩೬

"ಈಗಲೆ ಸ್ವರಾಜ್ಯವನು ಕೊಟ್ಟರುಪಭೋಗಿಸಲು
ಸಾಗುವುದೆ, ಇವರಿಂದ" ಎಂಬುದನು ತಿಳಿಯಲಿ
ಕ್ಕಾಗಿ ಸಾಮ್ರಾಜ್ಯಸರಕಾರವೂ ನಮ್ಮ ಪರಿಪರಿ ಪರೀಕ್ಷಿಸುವುದೆನುವ. ॥
ಹೇಗಾಡರೂ ನಾವು ಈ ಕೆಲಸದಲ್ಲಿ ಮುಂ
ದಾಗಿ ಸಾಧಿಸಿ, ರಾಜಭಕ್ತಿಯನು ಬಿಡದೆ, ಆ
ನಾಗಧರನಿಂದರ್ಜುನನು ಶರವ ಪಡೆದಂತೆ ಪಡೆವುದು ಸ್ವರಾಜ್ಯವನ್ನು. ॥ ೩೭ ॥

ನಮ್ಮ ಹಕ್ಕುಗಳ ನಮಗೀಯಲಿಕ್ಕಾಜನರ
ಸಮ್ಮತಿ ಇರುವುದು, ಸ್ವಾತಂತ್ರ್ಯಪ್ರಿಯರು ಅವರು,
ಸುಮ್ಮನೇ ಆಂಗ್ಲರೆಲ್ಲವರನೂ ದೂರಿದರೆ ಸತ್ಯಕ್ಕೆ ಸಮವಾಗದು. ॥
"ತಮ್ಮಂತೆ ಪರರೆ"ಂಬ ತತ್ವವೇ ಆ ಜನರ
ನಿರ್ಮಲಾಂತಃಕರಣದಲ್ಲಿ ನೆಲೆನಿಂತಿಹುದು,
ಒಮ್ಮೊಮ್ಮೆ ಒಬ್ಬೊಬ್ಬ ದುಷ್ಟನಿದ್ದರೆ ಸರ್ವರನು ದುಷ್ಟರೆನ್ನಬಹುದೆ? ॥ ೩೮ ॥

ವಿದ್ವಾಂಸನಾಗಿರುವ ಹಾರ್ಡಿಂಜನನು ನೋಡಿ,
ಬುದ್ಧಿಸಾಗರನಾದ ಹಾರ್ನಿಮನ್ನನ ಕೇಳಿ,
ಯುದ್ಧಪಟುವಾದ ವೆಜುವುಡ್ಡನಲ್ಲಿಂದ ಕರೆದೆಂಬುದಕೆ ಕಿವಿಯ ಕೊಡಿರಿ; ॥
ಸದ್ಯಕಿವರನ್ನೆಂಬೆನಿನ್ನೂ ಮಹಾಪುರುಷ
ರೆದ್ದು ನಮ್ಮಯ ಕೈಗೆ ಕೈಗೊಡಲು ಅವರಲ್ಲಿ
ಸಿದ್ಧರಿರುವರು, ಹೀಗಿರಲು ನಾವೆ ಸುಮ್ಮಸುಮ್ಮನೆ ಕುಳಿತುಕೊಳ್ಳಬಹುದೆ? ॥ ೩೯ ॥

ಎಲ್ಲ ಜನ್ಮಗಳಲ್ಲಿ ನರಜನ್ಮವೇ ಶ್ರೇಷ್ಠ,
ಎಲ್ಲ ಲೋಕಗಳಲ್ಲಿ ನರಲೋಕವೇ ಶ್ರೇಷ್ಠ,
ಎಲ್ಲ ಮತಗಳ ನೋಡೆ, ಸ್ವಾವಲಂಬಸವೆಂಬ ಮತವೆ ಸರ್ವಶ್ರೇಷ್ಠವು. ॥
ಎಲ್ಲೆಲ್ಲಿಯೂ ಇದನೆ ಕೇಳುತ್ತಲಿರುತಿಹರು,
ಅಲ್ಲಲ್ಲಿ ಅವರವರಿಗೊದಗುತ್ತಲಿರುತಿಹುದು,
ಇಲ್ಲಿಯಾದರು ನಮಗೆ ಸಿಕ್ಕದಿರುವುದೆ ನೋಡಿ ಐಗುಪ್ತದಾ ಪ್ರಾಪ್ತಿಯ. ॥ ೪೦ ॥

ಮುಂಡ ತಲೆ ಕೈಕಾಲುಗಳನೆಲ್ಲ ಕಡಿಕಡಿದು
ತುಂಡುತುಂಡಾಗಿ ಮಾಡಿದರೀತಿ ಈ ಭರತ
ಖಂಡವಾಗಿದೆ, ಒಂದು ಭಾಷೆಯಿಹ ನಾಡನೊಂಬತ್ತು ಕಡೆಯಲ್ಲಿ ಹಂಚಿ. ॥
ಕಂಡುಬಹುದೀಗ ಇದರಿಂದ ಬಹುನಷ್ಟಗಳು,
ದೊಂಡೆಯನು ಸೀಳಲೂ ಮಾತಾಡಲಾಗುವುದೆ?
ಪಂಡಿತರಮತ, ದೇಶಪುರುಷನಾ ದೇಶಭಾಷೆಯ ಬಿಡಲು ಮೂಕನೆಂದು, ॥ ೪೧ ॥

ಅದರಿಂದ ಪ್ರಾಂತವಿಭಜನೆಯಾಗಬೇಕು, ಒ
ಪ್ಪಿದ ಕೆಲಸವದು, ಹೇಗೆನಲು: — ಭಾಷೆ ಇದ್ದಂತೆ
ವಿಧವಿಧದಿ ವಿಂಗಡಿಸಿ, ಒಂದೊಂದು ದೇಶಗಳನೇ ಬೇರೆಬೇರೆ ಮಾಡಿ; ॥
ಇದು ಕನ್ನಡದ ನಾಡು, ಇದು ತಮಿಳು, ಮಲೆಯಾಳ,
ಇದು ತೆಲುಗು, ಬಂಗಾಳಿ, ಗುಜರಾಥಿ, ಮಾರಾಠಿ,
ಇದು ಹಿಂದಿ, ಎಂದು ಭಾಗಿಸೆ ಪೂರ್ವದಂದದಿಂದಲಿ ಪ್ರಗತಿಮಾರ್ಗವಹುದು. ॥ ೪೨ ॥

ಮನದಲಿದ್ದುದನು ಮಾತಾಡಲಾಗದ ಮೇಲೆ
ಎನಿತು ಕಲಿತರು, ಏನುಮಾಡಿದರು ಫಲವೇನು?
ಮನುಜಗಿದು ಒಂದು ರೀತಿಯಲಿ ಕಾರಾಗಾರವಾಗಿರುವುದಷ್ಟಲ್ಲದೆ; ॥
ಮನದಲಿದ್ದುದನು ಮಾತಾಡಿ, ಮಾತಾಡಿದುದ
ಜನರು ಮೆಚ್ಚುವ ತೆರದಿ ಮಾಡದಿದ್ದರೆ, ಅದುವೆ
ಜನಪದದ್ರೋಹವಾಗುವುದು, ಆತ್ಮದ್ರೋಹವೆಂದರೂ ತಪ್ಪಾಗದು. ॥ ೪೩ ॥

ಲೆಕ್ಕಣಿಕೆಹಿಡಿದವಗೆ ಬರೆವಾಸೆ, ಪುಸ್ತಕವ
ತೆಕ್ಕೊಂಡವನಿಗೋದುವಾಸೆ, ವ್ಯಾಪಾರ ಕಾ
ರ್ಯಕ್ಕಿಳಿದವನಿಗೆ ಧನವನ್ನಾರ್ಜಿಸುವ ಆಸೆಯೊಂದೇ ಮನಸ್ಸಿನಲ್ಲಿ ।'
ಮಿಕ್ಕುಮಿಾರುವುದು, ಆಯಾ ವಿಷಯಗಳಲಿ ಕೈ
ಇಕ್ಕಿದವರಿಗೆ ಅದದುಯೋಚನೆಯೆ ತಕ್ಕುದು, ಅ
ದಕ್ಕೆ ಸಹಕಾರಿಯಾಗಿರುವ ಸಾಧನವೆಂಬುದೊಂದಾದರಿಲ್ಲ ನಮಗೆ. ॥ ೪೪ ॥

ಎಲ್ಲವೂ ನಿಮ್ಮದೇ, ಅದರೊಳಗಿರುವ ಒಂದು
ಹುಲ್ಲನಾದರು ಮುಟ್ಟಬಾರದೆಂಬಂತೆ, ಕೈ
ಯ್ಯಲ್ಲಿ ಪೆಟ್ಟಿಗೆ ಕೊಟ್ಟು ಬೀಗವನ್ನಿಟ್ಟುಕೊಂಡಂತೆ, ನಮ್ಮಾದೇಶದ ॥
ಎಲ್ಲವೂ ನಮ್ಮದಾಗಿದೆ. ಒಳಗಿರುವುದನ್ನು
ಬಲ್ಲವರು ನಾವಲ್ಲ, ತಿಳಿಯಲೆಡೆಯಿಲ್ಲ, ಇದ
ಕೆಲ್ಲ ಕಾರಣ, ರಾಜಕೀಯಪ್ರಗತಿಯ ಹಕ್ಕುಗಳು ಕೈಸೇರದಿಹುದೆ. ॥ ೪೫ ॥

ಭರತಖಂಡದ ಬೊಕ್ಕಸದ ಹಕ್ಕು ನಮ್ಮಲ್ಲಿ
ಬರಬೇಕು, ಆದಾಯ ವೆಚ್ಚಗಳು ನಮಗೆ ತಿಳಿ
ದಿರಬೇಕು, ಸರ್ವಕಾರ್ಯವು ಲೋಕಮತದ ಕೈಯೊಳಗಡಗಿ ನಿಲ್ಲಬೇಕು. ॥
ನರಜನ್ಮದಲ್ಲಿ ಬಂದಿರುವವರಿಗೆಲ್ಲರಿಗು
ಸರಿಸಮಾನತೆಯು ಸ್ವಾತಂತ್ರ್ಯಗಳು ಸಿಗಬೇಕು;
ಭರತಖಂಡವು ಸರ್ವರಾಷ್ಟ್ರಮಾಲಿಕೆಯಲಿಪುರವಣಿಯ ಹೊಂದಬೇಕು. ॥ ೪೬ ॥

ಇದುವೇ ಸ್ವರಾಜ್ಯವೆಂಬುದು ನಾವು ಕೇಳುತಿ
ದ್ದುದು, ಇದನೆ ನಮಗವರು ಕೊಡಲಿಕಿರುವುದು, ಇನ್ನು
ಇದಕೆ "ಸಾಮ್ರಾಜ್ಯದಂತರ್ಗತ"ಎನುತ್ತಿಲ್ಲಿ ವಿದಿತವಾಗಿರುವ ಹೆಸರು. ॥
ಇದನಾವು ಪಡೆಯದಿದ್ದರೆ ಮಾನವರ ಜನ್ಮ
ಅದು ಬರಿಯ ಅಪಹಾಸ್ಯಕೆಡೆಯಾಗಿ ಸಲ್ಲುವುದು,
ಅದರಿಂದ ಬೇರೆಯವರಂತೆಯೇ ನಾವೂ ಸ್ವರಾಜ್ಯವನು ಪಡೆಯಬೇಕು. ॥ ೪೭ ॥

ಹೊರೆಯನಿಟ್ಟರಿತುಕೊಳ್ಳುವುದು ಕೊರಳಿನ ಬಲವ,
ಧುರಕೆ ತಂದೊಡ್ಡಿ ತಿಳಿವುದು ಬಂಟನೆದೆಯ, ದು
ಷ್ಕರ ರಾಜಕಾರ್ಯದಲಿ ಮಂತ್ರಿಗಿಹ ರಾಜಕಾರಣಪಟುತೆಯನ್ನರಿವುದು; ॥
ಸರಿಯಾದ ಹಕ್ಕುಗಳ ಕೊಟ್ಟು ಹಿಂದಿಗಳಲ್ಲಿ
ಇರುವೀ ಸ್ವರಾಜ್ಯೋಪಭೋಗಕ್ಷಮತೆಯನ್ನು
ಅರಿತುಕೊಳ್ಳುವುದು, ಅಲ್ಲದೆ ಚಿನ್ನವನು ಕೆಸರಿಗಿಡುಕಲದು ಮಿಣುಕಲುಂಟೆ? ॥ ೪೮ ॥

ಮರುಳು ಬಿಟ್ಟಾಮೇಲೆ ಮದುವೆ, ಮದುವೆಯ ಮೊದಲು
ಮರುಳು ಬಿಡದಾದರೀ ರೋಗದ ನಿದಾನವನು
ಪರಿಕಿಸಿದರಿಲ್ಲಿ ಮದುವೆಯ ಮರುಳು ಹಿಡಿದುದಲ್ಲದೆ ಬೇರೆ ಮರುಳಿಲ್ಲವು. ॥
ಸರಿಯಾದ ಸಾಮರ್ಥ್ಯ ನಿಮ್ಮ ಹಿಂದಿಗಳಲ್ಲಿ
ಬರಬೇಕು, ನಿಮಗೀ ಸ್ವರಾಜ್ಯವನು ಕೊಡಲಿಕೆಂ
ಬರು; ತತ್ವವಿಷ್ಟೆ, ಸಾಮರ್ಥ್ಯ ಪುಟವೇರಲು ಸ್ವರಾಜ್ಯವೇ ಬರಲು ಬೇಕು. ॥ ೪೯ ॥

ಮಗುವತ್ತ ಹೊರತು ಮೊಲೆಯುಣಿಸುವಳೆ ತಾಯಿ? ಅದು
ನಗುತಿರಲು ಬೆನ್ನುದ್ದಿ ಹೋಗುವಳು; ಹಾಗಿದೇ
ಸೊಗವೆಂದು ನಾವು ಕುಳಿತರೆ, ಸ್ವರಾಜ್ಯವು ನಮಗೆ ಬರುವುದೇ? ನಾವೆಲ್ಲರು ॥
ಬಗೆಯೊಪ್ಪುವಂದದಲಿ ಪಾರ್ಲಿಮೆಂಟನ ಕಿವಿಗೆ
ಹೊಗಿಸುವುದು ನಮ್ಮ ಸಂಕಷ್ಟಗಳನೆಲ್ಲವನು,
ಸಿಗುವುದೊಡನೆಯೆ ನಮ್ಮ ಹಕ್ಕು "ಕೈಕೆಸರಾಗೆ ಬಾಯಿಮೊಸರೆ"ಂಬ ತೆರದಿ. ॥ ೫೦ ॥

ಜಡದೇಹವಿದರ ಸುಖದುಃಖಗಳಿಗಾಗಿ ನಾ
ವಡಿಗಡಿಗೆ ಹಿಗ್ಗುವುದು ತಗ್ಗುವುದದೇಕೆ? ಬೆಂ
ಬಿಡದೆ ಹಗಲಿರುಳಾಗುವಂತೆ, ಏರಿಳಿತಗಳು ಒಳಕೊಂಡಿರುವುವು ನೋಡೆ. ॥
ಎಡೆಬಿಡದೆ ಸಾಗಿಸುವುದೇ ನಮ್ಮ ಕೆಲಸ, ಅದ
ಪಡೆವುದಾಗಲಿ ಪಡೆಯದಿರುವುದಾಗಿಲಿ, ದೇವ
ರಿಡುವಂತೆ ಆಗುವುದು; ಬಿಡದೆ ಇದನಾವು ಹಟಹಿಡಿವುದೊಂದೇ ವ್ರತವನು. ॥ ೫೧ ॥

ಹಿಂದೀಜನಾಂಗವೆಂದೆಂಬ ರಥದಿಬ್ಬದಿಗೆ
ಹೊಂದಿಸುತ ರಾಷ್ಟ್ರೀಯಸಭೆ, ಮಹಮ್ಮದಿಸಭೆಗ
ಳೆಂದೆಂಬ ಚಕ್ರಗಳನಾ ಸ್ವರಾಜ್ಯದಸಂಘವೆಂಬ ಕುದುರೆಯನು ಹೂಡಿ; ||
ಮುಂದಾಳುಗಳ ಸಾರಥಿತ್ವದಿಂದೀಗಲಿದೊ,
ಬಂದೇರಿದನು ಲೋಕಮತವೆಂಬ ರಥಿಕನಾ
ನಂದದಲಿ ಸಾಮ್ರಾಜ್ಯದೊಡನೆ ಕೈಗೊಟ್ಟು, ಎಂದೆಂದೂ ಸುಖದಿ ಬಾಳಲು. || ೫೨ ||

ನಂಬಿರಿ ಸ್ವರಾಜ್ಯವೇ ನಮಗಮೃತಪಾನಕವು,
ಸಂಭವಿಸುವುದು ಸವಿಯೆ ಚೈತನ್ಯವದರಿಂದ,
ಕಾಂಬುದಾಮೇಲೆ ವಿಧವಿಧದ ಉತ್ಸಾಹ, ಕೈಕೊಂಬುದು ದೃಢವ್ರತವನು. ||
ಉಂಬಾಗ ತಿಂಬಾಗ, ನಡೆವಾಗ ನುಡಿವಾಗ,
ತಂಬುಲವ ಜಗಿವಾಗಲೂ, ಉಗುಳ್ವಾಗಲೂ.
ಎಂಬುದದನೇ; ಕಡೆಗೆ "ಭ್ರಮರಕೀಟನ್ಯಾಯ"ದಂತೆ ಕೈಗೂಡದಿರದು. || ೫೩ ||

ತಿಲಕಸಂದೇಶವೀರೀತಿ ಕಿವಿಯಲಿ ಬೀಳೆ
ಒಳಕೊಂಡುದಾಸೇತುವಿಂದ ಹಿಮಗಿರಿವರೆಗೆ,
ಕಳಕಳ ಸ್ವರಾಜ್ಯ, ಒಂದಲ್ಲದಿನ್ನೊಂದಿಲ್ಲ ಎಲ್ಲಿನೋಡಿದರಲ್ಲಿಯೂ. ||
ಬಳೆದುದಾಬಾಲವೃದ್ಧರತನಕ ಸರ್ವರೂ
ತಿಳಿದುಕೊಂಡರು ತಮ್ಮ ತಮ್ಮ ಹಕ್ಕುಗಳನ್ನು
ಮಿಳಿತರಾದರು ಮತ್ತೆ, ಮೂರುಮುಕ್ಕಾಲುಪಾಲಲ್ಲಲ್ಲಿ ಸಭೆಯಾಯಿತು. || ೫೪ ||

ಆವವನು ತನ್ನ ಗೃಹದಾಧಿಪತ್ಯವ ಬಿಡುವ
ನಾವವನು ಸ್ವಾಭಿಮಾನವ ಕಳೆದುಕೊಳ್ಳುವನು?
ಆವನಂಗೈಯಲ್ಲಿ ಬಂದುದನು ಮುಂಗೈಗಳಲಿ ದೂಡುವಾ ಮೂಢನು? ||
ಮೂವತ್ತಮೂರ್ಕೋಟಿ ಮಿಕ್ಕಿರುವ ಹಿಂದಿಗಳು
ಭಾವಿಸದೆ ತಮ್ಮಲನ್ಯೋನ್ಯಭೇದಗಳನ್ನು,
ಕೇವಲ ಸ್ವರಾಜ್ಯಪರತತ್ವವನೆ ನೆನೆಯುತ ತದೇಕಚಿತ್ತದಿ ನಿಂದರು. || ೫೫ ||

ಆರನೆ ಸಂಧಿ ಸಂಪೂರ್ಣ.

**ಸಂಧಿ ಆರಕ್ಕೆ ಪದ್ಯ ೨೪೦.**

---

# ಏಳನೆ ಸಂಧಿ.

**ಸೂಚನೆ:**

ಧರೆಗೆ ತನ್ನಯ ಕಾರಣಿಕವನ್ನು ತೋರಿಸುತ,
ಪರದೇಶಗಮನವನು ಮಾಡಿ ಹಿಂದಿರುಗುತ್ತ,
ಸರುವಜನರಂತರಂಗದಿ ವಾಸಮಾಡುತ್ತ, ಪರತತ್ವದಲಿ ನಿಂದನು. ॥

ಭಾರತೀಧ್ವಜತಿಲಕನಾಮೇಲೆ ನಾಸಿಕದಿ
ಸೇರಲಿಕ್ಕಿರುವ ಪ್ರಾಂತಿಕಪರಿಷದಕ್ಕೆ ವೈ
ದೋರುವುದನರಿತಲ್ಲಿನವರೆಲ್ಲ ತಂತಮ್ಮ ಆಪ್ತೇಷ್ಟರನು ಬರಿಸುತ; ॥
ಊರಸಿಂಗರಿಸಿದರು ಹಲವು ವಿಧವಾಗಿರುವ
ತೋರಣಪತಾಕೆ, ಮೇಲಾದ ಚಿತ್ರಗಳಿಂದ
ಸಾರಿದರು ಡಂಗುರವ, ಊರೂರು ಹಳ್ಳಿಹಳ್ಳಿಗಳ ಮೂಲೆಗಳಲ್ಲಿಯು. ॥ ೧ ॥

ಪಟ್ಟಣಕೆ ಬಂದು ಹೊಸಹೊಸ ವಸ್ತ್ರಗಳ ತೆಗೆದು
ಉಟ್ಟುಕೊಂಡರು ಕೆಲರು, ಅಂಗಿಗಳ ಮಾಡಿಸುತ
ತೊಟ್ಟುಕೊಂಡರು ಕೆಲರು, ಮುಂಡಾಸುಗಳ ತಲೆಗೆ ಕಟ್ಟಿಕೊಂಡರು ಕೆಲವರು; ॥
ಪಟ್ಟೆಪೀತಾಂಬರವ ಧರಿಸಿ ಸೆರಗನು ಜೋಲು
ಬಿಟ್ಟುಕೊಂಡರು ಕೆಲರು, ಕನ್ನಡಿಯ ನೋಡಿ ಬೊ
ಟ್ಟಿಟ್ಟುಕೊಂಡರು ಕೆಲರು, ಬಗೆಬಗೆಯ ವೇಶಗಳ ಕಟ್ಟಿಕೊಂಡರು ಕೆಲವರು. ॥ ೨ ॥



ಒಂದುಕಡೆ ಮುಂಡಾಸಿನವರ ಸಮುದಾಯ, ಇ
ನ್ನೊಂದುಕಡೆ ಪಾಗುಗಳನಿಟ್ಟವರ ತಂಡ, ಮ
ತ್ತೊಂದುಕಡೆ ಟೊಪ್ಪಿಗೆಯ ಕೂಟ, ಈರೀತಿ ಜನ ಸಾಂದ್ರವಾಗಿರುತಿದ್ದುದು. ॥
ಮುಂದೆ ಬೆತ್ತವಹಿಡಿದು, ಹೋ! ಸಾರಿ, ತೊಲತೊಲಗಿ
ರೆಂದು ತಿರುಗಾಡುವ ಸ್ವಯಂಸೇವಕರ ಸೇನೆ
ಯಿಂದಲಾನೋಟ, ನೋಟಕರ ಮನಕಿದಕಿನ್ನು ಸಾಟಿಇಲ್ಲೆಂದೆನಿಸಿತು. ॥ ೩ ॥

ಅಪ್ಪರಲಿ ಕೇಳಿಸಿತು ಕೂಗೊಂದು, ಒಡನೆ ಬುಸು
ಗುಟ್ಟುತಲಿ ಬರುವ ಕರ್ಕೋಟಕನೊ! ಹೇಳೆನಲು,
ಪಟ್ಟಣವನಲ್ಲಾಡಿಸುತ, ಘುಡುಘುಡಿಸಿ ಕಿಡಿಯನಿಟ್ಟು ಹೊಗೆಯನು ಕಾರುತ; ॥
ಸೃಷ್ಟಿಯೆಲ್ಲವು ಇಂದಿನಿಂದ ಸ್ವಾತಂತ್ರ್ಯವನು
ಪಟ್ಟರಲು ತಕ್ಕುದೆನ್ನುತ ಬ್ರಿಟನ ದೇವಿ ಇದು
ಕೊಟ್ಟು ಕಳುಹಿಸಿದ ಸಂದೇಶವೆನೆ, ಹೊಗೆಗಾಡಿ ಕಟ್ಟನೈತಂದುದಾಗ. ॥ ೪ ॥

ಯಂತ್ರವನು ಹಿಡಿದು ಕೈಯಲಿ, ನೋಡಿರೀರೀತಿ
ತಂತ್ರದಿಂದಲೆ ನಾವು ಸರ್ವರನು ಹೀಗೆಯೆ ನಿ
ಯಂತ್ರಿಸುವೆವೆಂದು ತೋರುವವನೆನಲು ಯಾಂತ್ರಿಕನು ನಿಂತಿರುವನೊಂದೆಡೆಯಲಿ. ||
ಸಂತಾಪ ಕಾರಣವಿದದರಿಂದ ಹೀಗೆ ಸ್ವಾ
ತಂತ್ರ್ಯದಲಿ ದಾರಿ ತಪ್ಪದೆ ನಡೆವುದೆಲ್ಲರೆನು
ವಂತೆ ತೋರುವುದೆನಲು, ತಡೆಯಿಲ್ಲದೈತಂದು ಹೊಗೆಗಾಡಿ ನಿಂದುದಲ್ಲಿ. || ೫ ||

ಗಾಡಿಯೊಳಗಿಂದ ಕೆಳಗಿಳಿದ ತಿಲಕನ ಪರಿಯೊ!
ಮೋಡಗಳ ಸಾಲುಗಳನೊಡೆದು ಸ್ವಪ್ರಭೆಯಿಂದ
ಕೂಡುವಾದಿತ್ಯಮಂಡಲವೊ! ಅಜ್ಞಾನವೆಂಬಾ ಹಿರಣ್ಯಕನ ಎದೆಯ ||
ಗೂಡನಿಬ್ಬಗೆ ಮಾಡಲೆಂದು ಕಂಬದಲುದಿಸಿ
ಮೂಡುತಿಹ ನರಸಿಂಹಮೂರ್ತಿಯೋ! ಎಂಬಂತೆ
ನೋಡುವರ ಕಣ್ಣುಗಳನೆಳೆದು, ಮಾನಸವನಲ್ಲಾಡಿಸುತ ದೊರಟನಂದು. || ೬ ||

ಆ ಸಮಯದಲಿ ಪಟ್ಟಣಿಗರಿದಿರುಗೊಂಡು, ವಿ
ಶ್ವಾಸಪೂರ್ವಕವಾಗಿ ವಂದಿಸುತ್ತ ಸ್ವರಾಜ್ಯ
ಘೋಷದಲಿ, ಸಿಂಗರಿಸಿತಂದ ಕುದುರೆಯ ಗಾಡಿಯನ್ನೇರಿಸುತ್ತಲದಕೆ, ||
ಲೇಸಾಗಿ ಹೂಡಿದಶ್ವಗಳ ಬಿಡಿಸುತ್ತ, ಉ
ಲ್ಲಾಸದಿಂದಲಿ ಹೆಗಲು ಕೊಟ್ಟೆಳೆಯುತಿದ್ದರು, ವಿ
ಲಾಸದಲಿ ನಾ ಮುಂದು, ತಾ ಮುಂದೆನುತಲಿ ಮುಂದಾಳುಗಳು ಸಂದಣಿಸುತ. || ೭ ||

ಇಕ್ಕಡೆಗಳಿಂದ ಮಲ್ಲಿಗೆಯ ಹೂ ಮಳೆಗಳನು
ಲೆಕ್ಕವಿಲ್ಲದೆ ಸುರಿಸುತಿದ್ದರತಿಭಕ್ತಿಯಲಿ,
ಚಿಕ್ಕವರು ದೊಡ್ಡವರು, ಹೆಂಗುಸರು ಗಂಡಸರು, ಮಕ್ಕಳುಮರಿಗಳೆನ್ನದೆ. ||
ಒಕ್ಕಣಿಸಲರಿದು, ನೋಡಿದಮಾತ್ರವೇ ತಿಲಕ
ಪಕ್ಷವನು ಸ್ವೀಕರಿಸಿದರು ಸರ್ವಜನರಿದನು
ಈಕ್ಷಿಸುತ ಮನಮರುಗಿ ಆಂಗ್ಲೊಇಂಡಿಯನರತಿ ಬೆಕ್ಕಸ ಪಡುತ್ತಿದ್ದರು. || ೮ ||

ಉಪ್ಪರಿಗೆಯೇರಿ ಹೆಂಗುಸರೆಲ್ಲ ಕಿಟಕಿಯಲಿ
ರೆಪ್ಪೆಯಲುಗದೆ ನೋಡುತಿದ್ದರಿಕ್ಕಡೆಗಳಲಿ,
ಬಪ್ಪವನ ಕಾಂಬಾತುರದಿ ತಮ್ಮ ತಮ್ಮ ಮಕ್ಕಳು ಮರಿಗಳನು ಮರೆಯುತ, ||
ಕುಪ್ಪಿಯೊಳಗಿರುವ ಪರಿಮಳದ ನೀರನು ಮೈಗೆ
ಲೆಪ್ಪ ಹಾಕುತ, ಪುಣುಗು ಕತ್ತುರಿಗಳನು ಕಣ್ಗೆ
ಕಪ್ಪೆಂದು ಸವರಿಕೊಳುತಾತುರದಿ ಕೊರಳುದ್ದ ಮಾಡಿ ನಿಲುಕುತ್ತಿದ್ದರು. || ೯ ||

ಎಣ್ಣೆಯನು ಹಾಕಿ ಕೈಯಲಿ ಬಾಚಣಿಗೆ ಹಿಡಿದು
ಕನ್ನಡಿಯ ನೋಡುತಿರುವಷ್ಟರಲ್ಲಿಯೆ ಲೋಕ
ಮಾನ್ಯರೈತಂದರೆಂಬುದ ಕೇಳುತಲ್ಲಲ್ಲಿಯೇ ಬಿಡಿಸುತೆದ್ದೊಬ್ಬಳು ॥
ಕನ್ನಿಕೆಯು, ಗಡಿಬಿಡಿಗೆ ಕೈಗೆಸಿಕ್ಕಿದ ಒಂದು
ಬಣ್ಣಹಚ್ಚಡವುಟ್ಟು, ಕುಂಕುಮವಿದೆಂದು ಕೆ
ಮ್ಮಣ್ಣಪುಡಿಯನು ಹಣೆಯಲಿಟ್ಟು, ಬೀದಿಯಲೋಡಿ ಬರುತಿದ್ದಳಾತುರದಲಿ. ॥ ೧೦ ॥

ಜನರ ಗೊಂದಲಕಿಳಿದು ಸುಮ್ಮಸುಮ್ಮನೆ ನಾವು
ದಣಿವುದೇತಕೆ? ಉಪಾಯದಿ ನೋಡಬೇಕೆಂದು
ಮನದಲೆಣಿಸುತ ಕೆಲವು ಪಟ್ಟಣದ ಬಾಲಕರು ಆನೆಯಾಡುತ್ತ ಬಂದು, ॥
ಕುಣಿಕುಣಿದು ದೀಪಗಳ ಕಂಬಗಳ ತುದಿಯೇರಿ,
ಅಣಕಿಸುತ ಹುರ್ರೆಂದು ಸಿಳ್ಳುಹಾಕುತ, ತಿರುಗಿ
ಮಿಣಿಮಿಣಿನೆ ನೋಡುತ್ತ, ಅಲ್ಲಲ್ಲಿ ಕುಳಿತಿದ್ದರತಿ ಕುತೂಹಲದಿಂದಲಿ. ॥ ೧೧ ॥

ನಾನು ಮೊದಲಾಗಿ ನಿಂತಿರುವ ಜಾಗದಲೀಗ
ನೀನು ಬಂದುದಿದೇಕೆ? ಹೋಗೆನುತಲೊಬ್ಬನೆನೆ,
ನಾನು ಮೊದಲಾಗಿ ನೋಡಿರುವೆನೀಜಾಗವನೆನುತ್ತ ಮತ್ತೊಬ್ಬನೆನಲು; ॥
ಏನಿದಿಪ್ಪತ್ತನೆಯ ಶತಮಾನದಲ್ಲಿಯೂ
ನಾನುನೀನೆಂಬ ಮಾತೇನು? ನಾವೆನಬೇಕು.
ನಾನುನೀನೆನೆದ್ವೈತ ನಾವೆಂಬುದದ್ವೈತವೆಂದನಿನ್ನೊಬ್ಬನಂದು. ॥ ೧೨ ॥

ಒಂದು ಕಡೆ ವೃದ್ಧಸಮುದಾಯವು ಬರುತ್ತಿರಲು,
ಒಂದು ಕಡೆ ಜೌವನಿಗತಂಡ ನುಗ್ಗುತ್ತಿರಲು,
ಒಂದು ಕಡೆ ರಾಜಭಟರಾರ್ಭಟಿಸಿ, ಜನರ ಗುಂಪನು ಚದರಿಸುತ್ತ ಬರಲು; ॥
ಒಂದುಕಡೆ ವೈದಿಕರ ವೇದಮಂತ್ರಗಳಿಂದ
ಒಂದುಕಡೆ ಸಂಗೀತ ನರ್ತನಾದಿಗಳಿಂದ,
ಒಂದುಕಡೆ ಜಯಜಯಧ್ವನಿಯಿಂದ ಆ ಜನರ ವೃಂದ ಹೊಗಳುತ್ತಲಿರಲು. ॥ ೧೩ ॥

ತೊಲತೊಲಗಿ ಸ್ವಾತಂತ್ರ್ಯಮೂರ್ತಿ ಇದೆ ಬರುತಲಿದೆ,
ತೊಲತೊಲಗಿ ರಾಷ್ಟ್ರದೇವತೆ ಇತ್ತ ಬರುತಲಿದೆ,
ತೊಲತೊಲಗಿ ಭಾರತಾಂಬರಭಾನು ಇತ್ತಿತ್ತ ಬೆಳಬೆಳಗಿ ಬರುಬರುತಿದೆ; ॥
ತೊಲತೊಲಗಿ ಸರ್ವೇಷ್ಟಸಿದ್ಧಿತಾ ಬರುತಲಿದೆ,
ತೊಲತೊಲಗಿ ಪೌರ್ವಾತ್ಯರೇಳಿಗೆಯೆ ಬರುತಲಿದೆ,
ತೊಲತೊಲಗಿ ಸರ್ವತಂತ್ರಸ್ವತಂತ್ರ ಬರುತಲಿದೆ, ಎಂದು ಕಹಳೆಗಳುಲಿದುವು. ॥ ೧೪ ॥

ಕೋಲಾಹಲದ ಮೇಲೆ ಕೋಲಾಹಲದಲಂದು
ಬಾಲಗಂಗಾಧರನ ಮೆರವಣಿಗೆ ಬರುತಿರಲು,
ಸಾಲುಸಾಲಾಗಿ ವರ್ತಕರು ಶ್ರೀಮಂತರೇ ಮೊದಲಾದ ಜನರು ಬಂದು; ||
ಲೀಲೆಯಿಂದ ಸುವರ್ಣವೃಷ್ಟಿಗರೆಯುತ್ತಿರಲು,
ಭೂಲೋಕವೆಲ್ಲವು ಸ್ವರಾಜ್ಯಘೋಷಗಳಿಂದ
ಕೀಲಿಸಿದ ತೆರನಾಗಿ ಬೊಬ್ಬೆಯುಬ್ಬರದಿಂದ ದುಮು, ದುಮಿಸಿತಾ ಸಮಯದಿ. || ೧೫ ||

ದಾರಿಯನು ಬಿಡಿಸುತಲಿ ಹಳೆಮುದುಕನೊಬ್ಬನು, ಕು
ಮಾರಕನನೊಡಗೊಂಡು, ಗಂಧಾಕ್ಷತೆಗಳು, ಕ
ರ್ಪೂರಾದಿಗಳನಿಟ್ಟ ಹರಿವಾಣವನ್ನು ಎಡಗೈಯ್ಯಲ್ಲಿ ಹಿಡಿದುಕೊಂಡು; ||
ಊರುಗೋಲನು ಬಲದಕೈಯ್ಯಲ್ಲಿ ಹಿಡುಕೊಂಡು,
ಸಾರಿ ಬಳಿಯಲಿ ಕುಳಿತು ಪಾದಪೂಜೆಯ ಮಾಡಿ,
ಆರತಿಯ ಬೆಳಗಿ ಕೈಮುಗಿದು, ವಂದಿಸಿ ನುತಿಸಲಾರಂಭಿಸಿದನು ಬಳಿಕ! || ೧೬ ||

ಜಯಜಯತು ಸತ್ಯಭಾಮಾಕಾಂತ ಗುಣವಂತ,
ಜಯಜಯತು ಶುಭ್ರಕೀರ್ತಿದಿಗಂತವಿಶ್ರಾಂತ,
ಜಯಜಯತು ಭಾರತೋದ್ಧಾರಕಾರಣ, ಶೌರ್ಯಧೈರ್ಯವಿಸ್ತಾರ ಧೀರ. ||
ಜಯಜಯತು ದೇವಾಂಶ ಶ್ರೀಮತ್ತಿಲಕವಂಶ,
ಜಯಜಯತು ದುರ್ಮತಧ್ವಂಸ, ವಿದ್ವಾಂಸ, ಜಯ
ಜಯಜಯತು ಲೋಕಮಾನ್ಯ, ಅನನ್ಯಸಾಮಾನ್ಯ ಕಾವುದೆಂದಡಿಗೆರಗಲು. || ೧೭ ||

ಕೂಡೆ ವಿಸ್ಮಿತನಾದ ತೆರದಿ ನಟಸುತ್ತವನ
ಕೂಡೆ ಕೇಳಿದನಿದೇನೆಂದದಕೆ ಸಂತಸವು
ಕೂಡೆ ಆನಂದಾಶ್ರುವಿಂದ ಪಾದಾಭಿಶೇಚನ ಮಾಡಿ ಹೀಗೆಂದನು: — ||
ನಾಡಿನಲಿ ಪ್ರತ್ಯಕ್ಷದೇವರೆಂದೇ ನಿಮ್ಮ
ನಾಡಿ ನಲಿವರು, ನಿಮ್ಮ ಬಲದಿಂದ ಭಾರತದ
ನಾಡಿ ನಲಿವುದು, ನಿಮ್ಮ ಪದಮಹಿಮೆಯನ್ನು ಕೊಂಡಾಡಲು ಸಮರ್ಥರಾರು? || ೧೮ ||

ನನ್ನ ಮಗನಿವನೊಮ್ಮೆ ಮತಿವಿಕಾರದಿ ಬಹಳ
ಬನ್ನಬಟ್ಟಿರಲು, ವೈದ್ಯರ ಕರೆಯಿಸುತ್ತದಕೆ
ನನ್ನ ಕೈಲಾದಮಟ್ಟಿನ ಮದ್ದುಮಾಯುಗಳ ಮಾಡಿಸಿದೆನಾಗದಿರಲು; ||
ಚೆನ್ನಾಗಿ ಯೋಚಿಸುತ ಹರಕೆಹಾಡುಗಳಿಂದ
ಇನ್ನು ನೋಡುವೆನೆಂದು ನೋಡಿದೆನು; ಶ್ರೀಲೋಕ
ಮಾನ್ಯರ ಸ್ವರಾಜ್ಯಸಂಘಕೆ ಸೇರುತವರ ಪಾದವ ಪೂಜಿಸುವೆನೆಂದೆನು. || ೧೯ ||

ಅಂದಿನಿಂದಲಿ ನನ್ನಮಗನ ರೋಗಗಳೆಲ್ಲ
ಹಿಂಡಿರುಗಿದುವು, ತಮ್ಮ ಕಾರುಣ್ಯದಿಂದ; ನಾ
ವಿಂದು ಪರ್ಯಂತ ಸರ್ವರು ಸುಖಿಗಳಾಗಿಹೆವು, ಮುಂದಾದರೂ ನಮ್ಮನು ॥
ಕುಂದುಕೊರತೆಗಳಿಲ್ಲದಂತೆ ಪಾಲಿಪ ಭಾರ
ತಂದೆ ತವಪದಕೊಪ್ಪಿರುವುದೆಂದು, ಕಣ್ಣೀರಿ
ನಿಂದ ಪಾದವ ತೊಳೆದನೆನೆ ಲೋಕಮಾನ್ಯಮಾಹಾತ್ಮ್ಯವದು ಸಾಮಾನ್ಯವೆ! ॥ ೨೦ ॥

ಇದನೋಡಿ ಸರ್ವಜನರೈತಂದು ಶ್ರೀತಿಲಕ
ಪದವನರ್ಚಿಸಿ ಗಂಧಪುಷ್ಪಾಕ್ಷತೆಗಳಿಂದ,
ಅಧಿಕತರ ಭಕ್ತಿಭಾವದಲಿವನೆ ಪ್ರತ್ಯಕ್ಷದೇವರೆಂದೆನುತಿದ್ದರು. ॥
ಸದಮಲಾಂತಃಕರಣರಾದ ಭಕ್ತರಿಗೆಲ್ಲ
ಬದಲೇನುಕೊಡಬೇಕು? ತನ್ನ ಸ್ವಾರ್ಜಿತವಾದ
ಮಧುರತರವಾಗಿಹ ಸ್ವರಾಜ್ಯಮಂತ್ರಪ್ರಸಾದವನಿತ್ತು ಮನ್ನಿಸಿದನು. ॥ ೨೧ ॥

ನೋಡಿ ಪರಿಶುದ್ಧರಾದರು ಕೆಲರು, ಬಳಿಕ ಮಾ
ತಾಡಿ ಪರಿಶುದ್ಧರಾದರು ಕೆಲರು, ಬಂದು ಕೊಂ
ಡಾಡಿ ಪರಿಶುದ್ಧರಾದರು ಕೆಲರು, ಹೊಸಹೊಸದು ಕೀರ್ತನೆಗಳನ್ನುರಚಿಸಿ, ॥
ಹಾಡಿ ಪರಿಶುದ್ಧರಾದರು ಕೆಲರು, ಶಿರವನೀ
ಡಾಡಿ ಪರಿಶುದ್ಧರಾದರು ಕೆಲರು, ಪದದಿ ಹೊರ
ಳಾಡಿ ಪರಿಶುದ್ಧರಾದರು ಕೆಲರು, ತಂತಮ್ಮ ಭಕ್ತಿಭಾವಗಳ ತೋರಿ. ॥ ೨೨ ॥

ಲೋಕಮಾನ್ಯನು ನಿರಾಲಸ್ಯದಿಂದೆಡೆಬಿಡದೆ
ಲೋಕದಲಿ ಸಂಚರಿಸಿ ಸರ್ವರಿಗು ತನ್ನಯ ವಿ
ವೇಕಾಮೃತವ ಸ್ವರಾಜ್ಯದ ಮಂತ್ರದಿಂದಂದು ಮಂತ್ರಿಸುತ ಕೊಟ್ಟಿರುವನು. ॥
ಆ ಕಾರಣದಿ ಭಾರತೀಯರಲಿ ನೋಡಲು ಅ
ನೇಕ ಸಂಸಾರಗಳು ಚಿತ್ತಪಾವನವಾಗಿ
ಭೂಕಲ್ಪದಲ್ಲಿ ಚಿತ್ಪಾವನರ ಜಾತಿಯಾಗಿರಬೇಕು ಅಂದಿನಿಂದ. ॥ ೨೩ ॥

ನಾನಾಪ್ರಕಾರದಿಂದೈತರುವ ಜನಗಳನು
ನಾನಾಪ್ರಕಾರದಿಂದಲಿ ಮನ್ನಿಸುತ, ತಿಲಕ
ನಾನಾಗರಿಕರ ಸಾಹಾಯ್ಯದಿಂದಲ್ಲಿಗೈತಂದ ಕಾರ್ಯವನು ಮಾಡಿ; ॥
ಜ್ಞಾನಸೂರ್ಯನು ತನ್ನ ಪ್ರಖರತರವಾದ ಸು
ಜ್ಞಾನಪ್ರಕಾಶವನು ಬೀರಿ, ಜನಮನದ ಅ
ಜ್ಞಾನಾಂಧಕಾರವನು ತೊಲಗಿಸುತ ಹಿಂದಿರುಗಿ ಹೊರಟನತಿ ವಹಿಲದಿಂದ. ॥ ೨೪ ॥

ಈ ರೀತಿ ಚಳವಳವನೆಬ್ಬಿಸುತ, ಅದರಿಂದ
ಭಾರತದ ಮಂತ್ರಿ ಮೋಂಟೆಗುದೊರೆಯು ಬರಿಸುತ್ತ,
ಭಾರತೀಯರ ಮತವ ಮಂಡಿಸಲು ಅವನತಿ ವಿಚಾರವಮಾಡುತ್ತಲಂದು, ||
ಸೇರಿ ಮೋಂಟೆಗು ಚೆಲ್ಮ್ಸಫರ್ಡರಿಬ್ಬರು ಹೊಸ ಸು
ಧಾರಣೆಯು ಯೋಜಿಸಲು, ಅದ ಪೂರ್ಣವೆಂದೆನುತ
ಬೇರೊಂದುಪಾಯವನು ಯೋಚಿಸಿದನಂದಾ ಸರಸ್ವತೀಧ್ವಜತಿಲಕನು. || ೨೫ ||

ಹೋಗಿ ಇಂಗ್ಲಂಡಿನಲಿ ಕುಳಿತು, ತನ್ನಯ ದೇಶ
ಕಾಗಿ ಸಾಧಿಸಿ ಸ್ವರಾಜ್ಯವ ಪಡೆಯಬೇಕೆಂದು,
ಸಾಗಿದನು ಪಡುಗಡಲತಡಿಗೆ ಸುಸ್ಥಿರಚಿತ್ತನಾಗಿ, ಆ ಸಮಯದಲ್ಲಿ ||
ಈಗ ಬರುವನು ಲೋಕಮಾನ್ಯನಿಲ್ಲಿಗೆ, ಅವನ
ಸ್ವಾಗತೀಕರಿಸುವೀ ಭಾಗ್ಯವು ದೊರೆಯಿತೆಂದು
ಬೀಗಿ ಸಂತೋಷದಲಿ ಕೂಗಿ ಬೊಬ್ಬಿಡುವುದೆನಲಾಗ ಕಡಲೆಸೆದುದಂದು. || ೨೬ ||

ಲೇಸಾಯಿತಿದು ಲೋಕಮಾನ್ಯರಾಗಮನವು, ವಿ
ಶೇಷಕಾರ್ಯಕ್ಕಾಗಿ ದಯಮಾಡಿರುವಿರಿ, ವಿ
ಶ್ವಾಸಪೂರ್ವಕವಾದ ನನ್ನ ಅಲ್ಪಾತಿಥ್ಯಗಳನು ಸ್ವೀಕರಿಸಿ ಮುಂದೆ ||
ತೋಷದಿಂದಲಿ ತೆರಳಬೇಕೆನುತ್ತ ಸ್ವರಾಜ್ಯ
ಘೋಷದಿಂದಲಿ ಕಡಲು ಕಾಲ್ದೊಳೆವುದೆಂಬಂತೆ
ಭಾಸವಾಗುತ್ತಿತ್ತು ಮಡಿಮಡಿದು ತಿಲಕಪದದೆಡೆಗೈದುತಿಹ ತೆರೆಗಳು. || ೨೭ ||

ಹಣ್ಣುಹಂಪಲವ ಕಾಣಿಕೆ ಕೊಡುವೆನೆಂಬೆನೋ!
ಮುನ್ನವೇ ದೇವತೆಗಳಾ ಕಲ್ಪವೃಕ್ಷವನು
ನನ್ನಲಿರಗೊಡದೆ ಕೊಂಡ್ಯೊದಿಹರು, ನಿನಗೀವ ಪುಣ್ಯ ನನಗಿಲ್ಲವಕಟಾ! ||
ನನ್ನ ದುರದೃಷ್ಟವೆನುತಲಿ ಹಿಂಜರಿದು, ಲೋಕ
ಮಾನ್ಯಗೀ ಉಪಚಾರವೇಕೆಂದು ತಿಳಿದು, ಸ
ನ್ಮಾನ್ಯವಾದ ಸ್ವರಾಜ್ಯಘೋಷ ಮಾಡುವುದೆನಲು, ಉಬ್ಬರಿಸಿ ಬೊಬ್ಬಿರಿದುದು. || ೨೮ ||

ಬಲಹೀನರಾದವರ ಬಲವಂತರ್ರೈತಂದು
ಬಲಿಗೊಳ್ಳುವರು ಹೀಗೆಹೀಗೆ, ನೋಡುವುದೆಂದು
ಕಲಿಯುಗದ ಮಹಿಮೆಯನು ಜಲಚರಗಳೆಲ್ಲವೂ ತಿಲಕನಿಗೆ ತೋರುವಂತೆ; ||
ಸುಳಿಸುಳಿದು ಹಿರಿಹಿರಿಯ ಮೀನುಗಳು ತಂತಮ್ಮ
ಬಳಿಬಳಿಗೆ ಬಂದ ಮರಿಮೀನುಗಳ ನುಂಗುತ್ತ,
ಚಲಿಸುತಿದ್ದುವು. ಇದುವೆ ನವನಾಗರೀಕತೆಯ ಒಳಗುಟ್ಟೊ? ತಿಳಿಯದಿಹುದು! || ೨೯ ||

ಕಾರಿಯವ ಸಾಧಿಸುವುದತಿಜೋಕೆಯಿಂದ, ಆ
ದಾರಿಯಲಿ ಸಾಮಾನ್ಯರಂತೆ ಕಾಣಿಸಿಕೊಂಡು
ಸೇರಿರುವರತಿ ಸಾಹಸಿಗಳೆಂದು, ಪ್ರತ್ಯಕ್ಷ ತೋರಿಸುವುದೆಂಬಂದದಿ; ॥
ಕ್ರೂರಜಲಚರನಿಕರಗಳನು ಒಳಕೊಂಡಿದ್ದು,
ಭೂರಿಗಂಭೀರತೆಯನಡೆಗೊಂಡ ಸಾಗರವು
ರಾರಾಜಿಸಿದುದಾ ಬಿರಾಕ್ರುಸಿಯ ಒಳಗಿನ ವಿಚಾರ ಹೀಗೆಂಬ ತೆರದಿ. ॥ ೩೦ ॥

ದಾರಿಯದು ಕೊರಕಲಿರೆ ಜೋಡು ಹಾಕುವ ತೆರದಿ,
ಜೋರು ಮಳೆಬಿಸಿಲಾಗೆ ಕೊಡೆಯ ಹಿಡಿಯುವ ತೆರದಿ,
ಕ್ರೂರಜಂತುಗಳಿರುವ ಸಾಗರವ ನಾವೆಯಲಿ ಪಾರಾಗುವೀ ತೆರದಲಿ, ॥
ಘೋರವಹ ಕಾಯಿದೆಗೆ ಸಿಲುಕದೆಯೆ ನೀವು ಅಧಿ
ಕಾರಿಗಳ ಬಾಯಿಂದ ಜಾರುವುದು ಹೀಗೆಂದು
ತೋರುವನೆನಲು ಹಡಗನೇರಿ, ಇಂಗ್ಲಂಡನ್ನು ಸೇರಿದನು ಶೀಘ್ರವಾಗಿ. ॥ ೩೧ ॥

ಅಲ್ಲಿರುವ ಲೋಕಮತವನ್ನು ಎಚ್ಚರಿಸುತ್ತ,
ಎಲ್ಲರ ಮನಸ್ಸುಗಳ ತನ್ನ ಕಡೆಗೊಲಿಸುತ್ತ,
ಎಲ್ಲೆಲ್ಲಿಯೂ ಭಾರತೀಯರ ಮಹತ್ವಕೆ ಉದಾಹರಣೆಗಳ ತೋರುತ; ॥
ನಿಲ್ಲದಲ್ಲಿಂದ ಹಿಂದಿರುಗುತ್ತ, ಭೂಲೋಕ
ದಲ್ಲಿ ಹಿಂದೀಸ್ವರಾಜ್ಯದ ಭೇರಿ ಮೊಳಗಿಸುತ,
ತಲ್ಲಣವಗೊಳಿಸುತ ವಿರುದ್ಧಪಕ್ಷೀಯರೆದೆ ಝಲ್ಲೆನಿಸುತಿರುತಿದ್ದನು. ॥ ೩೨ ॥

ಲೋಕದವರೆಲ್ಲರಿಗೆ ಮೇಲು ಹಂತಿಯ ನಾನು
ಹಾಕಿಕೊಟ್ಟೆನು; ಇನ್ನು ಮುಂದವರೆ ಸಾಧಿಸುತ
ಜೋಕೆಯಿಂದ ಸ್ವರಾಜ್ಯವನ್ನು ಪಡೆಯುವರಾದ್ದರಿಂದ ಈ ಅವತಾರವ ॥
ಸಾಕುಮಾಡುತ ಸರ್ವಹೃದಯಾಬ್ಜದಲ್ಲಿ ಹಂ
ಸಾಕಾರನಾಗಿ ಪ್ರೇರಿಸುವೆನೆಂದೆನುತಲಿ, ವಿ
ವೇಕಿಗಳ ತಿಲಕನಂತಿದ್ದನಾ ಮಾಧವಾಚಾರ್ಯನಪರಾವತಾರಿ. ॥ ೩೩ ॥

ಚಿಕ್ಕಂದಿನಲಿ ತಾಯಿತಂದೆಗಳು ತಂತಮ್ಮ
ಮಕ್ಕಳನು ಕಾಪಾಡಬೇಕು; ಮತ್ತವರವರ
ಹಕ್ಕುಗಳ ತಿಳಿದ ಮೇಲವರೇ ಸ್ವತಂತ್ರರಾಗಿಯೆ ನಡೆಯಬೇಕಲ್ಲದೆ; ॥
ರಕ್ಷಕರು ನಡೆಯಿಸುತ್ತಿದ್ದರದರಿಂದವರ
ಉಕ್ಕಿಬರುತಿರುವ ಉತ್ಸಾಹಕ್ಕೆ ತೊಡಕಾಗಿ,
ಸಿಕ್ಕಿಬೀಳುವರು ವೈಗಳ್ಳತೆಯ ಬಲೆಯಲಿ, ಇದಕ್ಕೆ ಸಂದೇಹವಿಲ್ಲ. ॥ ೩೪ ॥

ಹಿಂದೆ ವಿದ್ಯಾರಣ್ಯನಾಗಿ ಕನ್ನಡಿಗರನು
ಕುಂದುಕೊರತೆಗಳಿಲ್ಲದಂತೆ ಪಾಲಿಸಿದೆನದ
ರಿಂದ ಮೈಗಳ್ಳರಾದರು ಕನ್ನಡಿಗರಾದ ಕಾರಣದಿ ಈ ಸಮಯದಿ; ॥
ಮುಂದಾಗತಕ್ಕ ಕೆಲಸಗಳ ನನ್ನೀ ದೇಶ
ಬಂಧುಗಳ ಕೈಯಿಂದ ಮಾಡಿಸುವೆನೆಂದೆನುತ
ಸಂದರ್ಭವನು ನಿರೀಕ್ಷಿಸುತಿದ್ದನಂದಾ ಸರಸ್ವತೀಧ್ವಜತಿಲಕನು. ॥ ೩೫ ॥

ಸರಿದನಲ್ಲಿಂದ ಮುಂಬಾಪುರಕೆ; ಅಲ್ಲಿರುವ
ಸರದಾರಗೃಹದಲ್ಲಿ ಇಳಿದುಕೊಂಡನು, ಮುಂದೆ
ಜ್ವರವು ಪ್ರಾರಂಭವಾಯಿತು, ಬಂದು ಕಂಡುದೆಲ್ಲಾ ವೈದ್ಯವೃಂದನಂದು. ॥
ಸರುವಜನರೈತಂದು ಲೋಕಮಾನ್ಯನ ಪಾದ
ಸರಸಿಜದ ಸೇವೆಯನು ಮಾಡುತಿದ್ದರು, ಕಡೆಗೆ
ಬರುಬರುತ ದಿನದಿನಕೆ ದೇಹಯಂತ್ರವು ಶಿಥಿಲವಾಗಿ ತ್ರಾಣವು ಕುಂದಿತು ॥ ೩೬ ॥

ಆ ಸಮಯದಲಿ ಮಹಾತ್ಮಾಗಾಂಧಿ, ವರ ಜಮುನ
ದಾಸ, ಶೌಕತಅಲ್ಲಿ, ಬಾಪ್ಟಿಸ್ತ ಮೊದಲಾದ
ದೇಶಭಕ್ತರು ಬಂದು, ಪಾದದೆಡೆಯಲಿ ನಿಂದು, ಕಣ್ಣೀರು ಸುರಿಸಲಂದು; ॥
ಕೇಸರೀಪತ್ರ, ಕಾರ್ಯಾಲಯವ ಸಹಿತಿನ್ನು
ದೇಶಕಾರ್ಯಕ್ಕಾಗಿ ವಿನಿಯೋಗಿಸುವುದೆಂದು
ಆ ಸುಜನರಕ್ಷಿಜಲದಿಂದ ಧಾರೆಯನೆರೆದು, ನುಡಿದನೀ ಸೂಕ್ತಿಗಳನು. ॥ ೩೭ ॥

ಭಾರತೀಯರು! ನಿಮ್ಮೊಳಗೆ ಭೇದವನ್ನಿಡದೆ
ಸೇರುತೊಮ್ಮನದಿಂದ, ಮುಂದೆ ನಿಂತಿಹ ಕಾರ್ಯ
ಭಾರವನು ಸಾಗಿಸಿರಿ, ಸರ್ವಜನರೂ ಸಹೋದರಭಾವದಿಂದಲಿರುತ, ॥
ಬೇರೆಯವರನು ನಿಮ್ಮನಿಮ್ಮ ಕಾರ್ಯಕೆ ಪಾಲು
ಗಾರರನು ಮಾಡದಿರಿ, ಮಾತೃದೇಶವನು ಉ
ದ್ಧಾರ ಮಾಡುವ ಕೆಲಸದಲಿ ಹಿಂದುಮುಂದು ನೋಡದೆ ಯತ್ನವನು ಮಾಡಿರಿ. ॥ ೩೮ ॥

ಶಾಂತೋಗ್ರಪಕ್ಷಭೇದಗಳಿಗೆಡೆಯನು ಕೊಡದೆ,
ಅಂತರಂಗವ ಶುದ್ಧಿಗೊಳಿಸುತೆಲ್ಲವರು ಆ
ಸಂತಾಪಕರದ ಬ್ರಾಹ್ಮಣ ಬ್ರಾಹ್ಮಣೇತರರ ಭೇದಗಳ ತಿತ್ತೆತ್ತುತ; ॥
ಸಂತೋಷದಿಂದೆಲ್ಲರೂ ಸೇರಿ ನಮ್ಮ ಸ್ವಾ
ತಂತ್ರ್ಯವನು ಕಾಪಾಡಬೇಕು; ಈ ರೀತಿ ಭಗ
ವಂತನುತ್ಕೃಷ್ಟಶಾಸನವು ಮಾನವರ ವರ್ಗಕೆ ಆದಿಯಿಂದಿರುವುದು. ॥ ೩೯ ॥

ಶ್ರಮವಿಭಾಗದ ತತ್ವವನು ಮೊದಲೆ ನಮ್ಮವರು
ಕ್ರಮಪಡಿಸಿರುವರು, ಪರಕೀಯಜನರಿದ ನೋಡಿ
ಭ್ರಮಿಸುವರು, ಜಾತಿಭೇದಗಳ ಸೌಕರ್ಯವೇನೆಂಬುದನು ತಿಳಿಯದವರು. ||
ಶ್ರಮವಿಲ್ಲದಿರುವ ಕುಲಶಿಕ್ಷಣವು ಇದರಿಂದ
ಕ್ರಮವಾಗಿ ದೊರೆಯುತಿತ್ತಾ ಕಾಲದಲಿ; ಈಗ
ಭ್ರಮೆಗೆ ಕಾರಣವಾಗಿರುವುದು ಪರಕೀಯ ಶಿಕ್ಷಣವು ನಮ್ಮಾ ಜನರಿಗೆ. || ೪೦ ||

ಎಲ್ಲರೂ ಸೇರಿ ಭೋಜನಪಾನಗಳ ಮಾಡು
ವಲ್ಲಿವರೆಗೂ ಭಾರತೀಯರಲಿ ಒಗ್ಗಟ್ಟ
ನಿಲ್ಲದೆಂಬುದಕರ್ಥವಿಲ್ಲ, ನೋಡೆ ಯುರೋಪಿನಲ್ಲಿ ಈ ಭೇದವುಂಟೆ? ||
ಅಲ್ಲಿ ಘನಘೋರವಾಗಿರುವ ಯುದ್ಧವು ಆಗ
ಲಿಲ್ಲವೆ? ಇದಕ್ಕೇನು ಹೇಳುವರು? ಮೊದಲು ನ
ಮ್ಮಲ್ಲಿ ಜನರೆಲ್ಲರೂ ಒಗ್ಗಟ್ಟನಿಂದ ಇರಲಿಲ್ಲವೇ? ಹಾಗಿರಲದು. || ೪೧ ||

ಆಲೋಚಿಸಿರಿ ನಮ್ಮ ಮೊದಲಿನ ಮಹತ್ವವನು,
ಆಲೋಚಿಸಿರಿ ಈಗ ಬಂದ ಹೀನತೆಯನ್ನು,
ಆಲೋಚಿಸಿರಿ ಮುಂದೆ ಮಾಡಬೇಕಾದುದನು, ಭಾರತೀಯರು ಸರ್ವರು ||
ಆಲೋಚಿಸುವ ಕಾಲ ಬಂದಿರುವುದೀಗ, ಇದ
ನಾಲೋಚಿಸಿರಿ, ಎಂದು ಕಣ್ಮುಚ್ಚಿ ಬಳಿಕ ತ
ನ್ನಾಲೋಚನಗಳ ತೆರೆಯುತ ಕೃಪಾದೃಷ್ಟಿಯಿಂದೀಕ್ಷಿಸುತ ಹೀಗೆಂದನು. || ೪೨ ||

ಎಲ್ಲರೊಂದಾಗಿ ಕೇಳಿದಮಾತ್ರದಿಂದ ಕುಳಿ
ತಲ್ಲಿಗೆ ಸ್ವರಾಜ್ಯಬರುವುದು, ಆದ್ದರಿಂದ ನಿ
ಮ್ಮಲ್ಲಿರುವ ಭೇದಗಳ ಬಿಡುವ ಕಾಲವು ಸಿದ್ಧವಾಗಿರುವುದೀ ಸಮಯದಿ, ||
ಅಲ್ಲಲ್ಲಿ ಹೋಗಿ ಭಾಷಣವ ಮಾಡುತ, ದೇಶ
ದಲ್ಲಿ ನವಜೀವನವ ತುಂಬುವುದು, ಈ ಕೆಲಸ
ದಲ್ಲಿ ನಿಃಸ್ವಾರ್ಥವೇ ನಮಗಿರುವ ಸರ್ವಯುದ್ಧೋಪಕರಣಗಳಾಗಿವೆ. || ೪೩ ||

ಮ್ಲೇಚ್ಛರೆಲ್ಲರು ಹಿಂದುಮತವ ಬಿಟ್ಟವರೆಂದು
ತುಚ್ಛೀಕರಿಸಬೇಡಿ ಹಿಂದುಗಳು; ಅದರಂತೆ
ಸ್ವೇಚ್ಛೆಯಿಂದಲಿ ಮಿಕ್ಕವರನು ಕಾಫರರೆಂದು ಜರೆಯದಿರಿ ಇಸ್ಲಾಮರು. ||
ಸ್ವಚ್ಛಮನದಿಂದೇಸುವನು ಭಜಿಸದವರನ್ನು
ಮಚ್ಚರಿಸಿ ಹಿದನರೆನ್ನುತ ಕರೆಯದಿರಿ ನೀವು;
ಹೆಚ್ಚೇನು, ಹಿಂದೀಗಳೆಂಬುದೊಂದದ್ವೈತಭಾವವನು ದೃಢಪಡಿಸಿರಿ. || ೪೪ ||

ಹಿಂದೂ ಮುಸಲ್ಮಾನ ಕ್ರೈಸ್ತರೆಂಬವರೆಲ್ಲ
ಒಂದೆ ತಾಯಿಯ ಮಕ್ಕಳಾಗಿದ್ದು, ತಮ್ಮೊಳಗೆ
ತಂದು ಮತಭೇದವನು ಜಗಳವಾಡುತ್ತಿರಲು, ಪರಕೀಯಜನರು ನೋಡಿ. ॥
ಬಂದು ತಮ್ಮಯ ಸೂಜಿಯನು ನಡೆಯಿಸದೆ ಬಿಡರು,
ಅಂದಿನಿಂದಿಂದುವರೆಗಿದರಿಂದಲೇ ನಾವು
ಹಿಂದಾಗಿಹೆವು, ಇನ್ನುಮುಂದಾದರೊಗ್ಗಟ್ಟನಿಂದ ಯತ್ನವ ಮಾಡಿರಿ. ॥ ೪೫ ॥
ಫಲದಪೇಕ್ಷೆಯ ಬಿಟ್ಟು, ನಿಷ್ಕಾಮಬುದ್ಧಿಯಲಿ
ಕೆಲಸಮಾಡಿರಿ ನೀವು; ಅದರಿಂದ ನಿಮ್ಮೆದಿರು
ನಿಲದೋಡುವುದು ಸ್ವಾರ್ಥವೆಂಬುವ ಪಿಶಾಚಿ, ಮುಂದೆಲ್ಲ ಭಾರತವರ್ಷಕೆ ॥
ಹಳೆಯ ದಿವಸಗಳು ಬರುವುವು, ಅಂಜದಿರಿ, ಎಂದು
ತಿಳಿಸುತಿರುವಷ್ಟರಲ್ಲಿಯೆ ಕಾಲಬಂತೆಂದು
ತಿಳಿದು, **ಹಿಂದೀಸ್ವರಾಜ್ಯ! ಗಾಂಧಿ!** ಎಂಬ ಮಾತುಗಳನುಚ್ಚರಿಸಿ ಬಳಿಕ; ॥ ೪೬ ॥
ಸತ್ವಗುಣವನು ಮಹಾತ್ಮಾಗಾಂಧಿಯನು ಕರೆದು
ಇತ್ತು, ಲಜಪತರಾಯನಿಗೆ ರಜೋಗುಣವನ್ನು
ತೆತ್ತು, ಶೌಕತಅಲ್ಲಿಗಾ ತಮೋಗುಣವನ್ನುದಾನವನು ಕೊಟ್ಟು ಮತ್ತೆ; ॥
ಸತ್ಯಧರ್ಮಕೆ ಹಾನಿಬರುವಲ್ಲಿ ನಾನು ಜನಿ
ಸುತ್ತ, ಭಾರತವನುದ್ಧರಿಸುವೆನು ಎಂದು, ಪರ
ತತ್ವವನು ಸೇರಿದನು, ನಿತ್ಯನಾದನು, ನಿರ್ಗುಣತ್ವವನು ಕೈಕೊಂಡನು. ॥ ೪೭ ॥



**ಲೋಕಮಾನ್ಯರ ನಿರ್ವಾಣೋತ್ಸವ.**

ಕೇಳಿದೊಡನೀ ಸುದ್ದಿಯನು ಕೆಲರು ಮೂರ್ಛೆಯನು
ತಾಳಿದರು, ನಡೆಯಲಾರದೆ ಮತ್ತೆ ಹಲಕೆಲರು
ಕಾಲು ಬಾರದ ಹೆಳವರಂತಾಗಿ ನಿಂತಲ್ಲಿ ನಿಂತು ಬೊಂಬೆಗಳಾದರು. ॥
ನಾಲಿಗೆಯೆ ಬಾರದಾದರು ಕೆಲರು, ಹಾ! ನಮ್ಮ
ಬಾಲಗಂಗಾಧರನೆ! ಎಂದೆನುತ ಕೆಲರು, ಈ
ಹಾಳುವಿಧಿಗೇಕೆ ಬೇಕೀಕೆಲಸವೆಂದು ಕೆಲಕೆಲರು ಮರುಗುತ್ತಿದ್ದರು. ॥ ೪೮ ॥

ಕಣ್ಣುಕಾಣದೆ ಕತ್ತಲೆಯಲಿರುವ ಸಮಯದಲಿ
ನಿನ್ನ ಸುಜ್ಞಾನಸೂರ್ಯನ ಕಿರಣದಿಂದ ನ
ಮ್ಮನ್ನು ಕಣ್ದೆರೆಯಿಸುತ ದಾರಿಯನು ತೋರಿಸಿದೆ. ಈಗ ನಡುಕಾಡಿನಲ್ಲಿ ॥
ಕಣ್ಣುಕಟ್ಟುತ ಹೋಗುವುದು ನೀತಿಯೇ ನೀನು !
ನಿನ್ನನಂಬಿದ ಭಕ್ತವರ್ಗವಾಗಿರುವ ನ
ಮ್ಮನ್ನು ವಂಚಿಸಿ, ಎಲ್ಲಿಗೈದಿರುವೆ! ಹಾ! ತಿಲಕ! ಹಾ! ಎಂದು ಗೋಳಿಟ್ಟರು. ॥ ೪೯ ॥

ಏಳೇಳು ತಿಲಕ, ಇದೆ ಬಂದು ನಿಂತಿರುವನು, ಚಿ
ರೋಲಸಾಹೇಬನಾತನ ಮೇಲೆ ನಿನ್ನ ವಾ
ಗ್ಜಾಲಪ್ರಹಾರವನು ಮಾಡು; ಇಂಗ್ಲಂಡಿನಲಿ ಹೋಗಿ ವ್ಯಾಜ್ಯವನು ಹೂಡು; ॥
ನಾಳೆ ರಾಷ್ಟ್ರೀಯಸಭೆ; ದೇಶಭಕ್ತರು ಬಂದು
ಕೇಳುವರು ನಿನ್ನ; ಪಂಜಾಬಿನವರೈತಂದು
ಗೋಳಿಡುವರಕಟ! ಡಾಯರನ ಉಪಟಳವನ್ನು ತಾಳಲಸದಳವೆನ್ನುತ. ॥ ೫೦ ॥

ಸುರತಪಟ್ಟಣದಿ ತೋರಿಸಿದ ವೀರಶ್ರೀಯ
ಧರಿಸು; ದಾವರನ ನ್ಯಾಯಸ್ಥಾನದಲಿ ನೀನು
ಜರೆದು ಅಧಿಕಾರಿವರ್ಗವ ನುಡಿದ ನುಡಿಯನುಚ್ಚರಿಸು, ಕೇಸರಿಪತ್ರದಿ ॥
ಬರೆದಗ್ರಲೇಖವನು, ಭಾರತೀಯರನು ಎ
ಚ್ಚರಿಸು; ಹಿಂದೂಮುಸಲ್ಮಾನರನು ಒಡನೆ ಸಹ
ಕರಿಸು; ಸ್ವೀಕರಿಸಾ ಸ್ವರಾಜ್ಯಸೂತ್ರವನೆಂದು ಮರುಮರುಗಿ ಬಾಯ್ಬಿಟ್ಟರು. ॥ ೫೧ ॥

ಅಳಲಿದರು. ಬಳಲಿದರು, ತೊಳಲಿದರು. ಕಂಗೆಟ್ಟು
ಬಳಿಬಳಸಿ, ಕಳವಳಿಸಿ, ಹಳವಳಿಸಿ, ಬಾಯ್ಬಿಟ್ಟು
ಒಳಗೊಳಗೆ ಮರುಗುತ್ತ, ಸೊರಗುತ್ತ, ಕಣ್ಣೀರು ಗಳಗಳನೆ ಸುರಿಸುತಂದು; ॥
ಒಲೆಯುತ್ತ, ಅಲೆಯುತ್ತ, ಕೆಲೆಯುತ್ತ, ಚೀರಿಟ್ಟು
ತಲೆತಿರುಗಿ, ನೆಲಕೊರಗಿ, ಸಲೆಮರುಗಿ, ಗೋಳಿಟ್ಟು
ಕಳಕಳಿಸಿ ಸಾಷ್ಟಾಂಗವೆರಗುತ್ತ, ಕೊರಗುತ್ತ, ಕೆಲಬಲದಲಿದ್ದರಂದು. ॥ ೫೨ ॥

ಈ ರೀತಿಯಿಂದ ಮರುಗುತ್ತಲಿರುತಿರುವ ವಿ
ಸ್ತಾರವಾಗಿಹ ಜನರ ಸಂದಣಿಯು ಸಂತೈಸಿ,
ಕಾರಿಯವು ಮುಂದಾಗತಕ್ಕುದನು ಮಾಡುವುದು ಪ್ರಥಮಕರ್ತವ್ಯವೆಂದು ॥
ಸೇರುತ್ತ; ಸಿಂಗರಿಸಿ ತಂದ ಪಲ್ಲಕಿಯನ್ನು
ಏರಿಸುತ, ಮೆರವಣಿಗೆಯಿಂದ ನಡೆತಂದರಾ
ಮೂರು ಮೂರ್ತಿಗಳಂತೆ. ಗಾಂಧಿ, ಜಮುನಾದಾಸ, ಶೌಕತಾಲಿಪ್ರಮುಖರು. ॥ ೫೩ ॥

ಮಾರ್ಗದಲಿ ಬರುತಿರುವ ಸಮಯದಲಿ ವರ್ತಕರ
ವರ್ಗವೇ ನಡೆತಂದು, ನವರತ್ನವೃಷ್ಟಿಯನು
ಸ್ವರ್ಗೀಯಪುರುಷನಿವನೆಂದು ಸುರಿಸಿದರು; ಇನ್ನಾರ್ಗಿದುಂಟೀ ಮಾನವು! ॥
ದುರ್ಘಟದ ರಾಜಕೀಯದ್ವಾರದಲಿ ನಮ್ಮ
ವರ್ಗೆ ದಾರಿಯ ಬಿಡಿಸಿ ಕೊಟ್ಟರುವನೆಂದು, ಕ
ಣ್ಣೀರ್ಗರೆದು ಹಿಂಬಾಲಿಸಿದರು ಪುರಜನರಂದು ಕೋಟಿಗಟ್ಟಲೆಯಿಂದಲಿ. ॥ ೫೪ ॥

ಬಂದು ಮೋಟರಲಿ ಧಾವಿಸುತ ಲಜಪತರಾಯ
ನಂದು ಹಾ! ಲೋಕಮಾನ್ಯಾ! ನಿನ್ನಕಡೆನೋಟ
ಇಂದೆನಗಲಭ್ಯವಾಯಿತೆ! ಎಂದು ಸಾಷ್ಟಾಂಗವೆರಗಿದನು ಭಕ್ತಿಯಿಂದ. ॥
ಸಂದೇಶಪತ್ರಕರ್ತರು, ದೇಶಭಕ್ತ ಅರ
ವಿಂದಘೋಷಾದಿಗಳು ಬರಲಾರದಕಟಕಟ
ನೊಂದು, ಕಳುಹಿದರಂದು ದುಃಖವಾರ್ತೆಯ ತಂತಿಯಿಂದ ಆ ಸಮಯದಲ್ಲಿ. ॥ ೫೫ ॥

ಮುಂದೆಮುಂದ್ಯೆತಂದು, ಚೌಪಾಟ ಎಂಬಲ್ಲಿ
ಮುಂದಾಗಿ ದೇಶಭಕ್ತರು ಸಿದ್ಧಗೊಳಿಸಿರುವ
ಚಂದನದ ಕಾಷ್ಟದಲಿ ತಂದಿಡುತ, ಸಾಷ್ಟಾಂಗ ವಂದಿಸುತ್ತಿರಲೆಲ್ಲರು, ॥
ಹಿಂದೂ, ಮುಸಲ್ಮಾನ, ಕ್ರೈಸ್ತಮತವೆಂದೆಂಬ
ಒಂದಾದರೂ ಭೇದವನು ಲೆಕ್ಕಿಸದೆ, ದೇಶ
ಬಂಧುವನು ದಹನಮಾಡುತಲಿ, ತಂತಮ್ಮ ಋಣದಿಂದ ಪಾರಾದರಂದು. ॥ ೫೬ ॥

ಮಡಿದವರಿಗಾಗಿ ಅಳುವರು ಬಂಧುಬಾಂಧವರು,
ಕಡೆಗವನ ದೇಹವನು ಕೊಂಡ್ಯೊದು ಮಸಣದಲಿ
ಸುಡುವರಿದು ಲೋಕಪದ್ಧತಿ; ಆದರೀ ಲೋಕಮಾನ್ಯನವಸಾನದಲ್ಲಿ, ॥
ಒಡಗೊಂಡು ಸೇತುವಿಂದ ಹಿಮಾಲಯದ ವರೆಗೆ
ಕಡುನೊಂದು ಕಣ್ಣೀರನಿಡುವರೆಂದೆನಲು, ಈ
ಪೊಡವಿಯಲಿ ಲೋಕಬಾಂಧವ್ಯಕೆಣೆಯಿಲ್ಲೆಂಬ ನುಡಿಯು ದೃಢವಾಯಿತಿಂದು. ॥ ೫೭ ॥

ಲೋಕಮಾನ್ಯನು ಮಡಿದನೆಂದು ಮರುಗುವರು, ಅವಿ
ವೇಕದಿಂದಜ್ಞಾನಿಗಳು; ತಿಳಿದುನೊಡೆ, ಈ
ಶೋಕಕ್ಕೆ ಅರ್ಥವುಂಟೇ? ಸರ್ವರಂತರಂಗದಿ ಪ್ರವೇಶವನು ಮಾಡಿ; ||
ಲೋಕಸೇವೆಯ ಮಾಡಿರೆಂದು ಮಾನಸವನು
ದ್ರೇಕಗೊಳಿಸುವನೇಳಿರೇಳಿರೆನ್ನುವನು, ಭೂ
ಲೋಕವನ್ನೇಕಕಾಲದಿ ಚರಿಸಲೆನುತ ವಾಯ್ವಾಕಾರನಾಗಿರುವನು. || ೫೮ ||

ಈ ಲೋಕಮಾನ್ಯಪೌರಾಣವನ್ನೋದಿದವ
ರೀಲೋಕಸೇವೆಯನು ಮಾಡುತ್ತ ಕಡೆಯಲ್ಲಿ
ಮೂಲೋಕಕೊಂದು ಮಾದರಿಯಾಗಿ ನಿಲ್ಲುವರಿದಕ್ಕೆ ಸಂದೇಹವಿಲ್ಲ. ||
ಭೂಲೋಕಕಿವನ ಚರಿತೆಯೆ ಕನ್ನಡಿಯು, ಇದನು
ಆಲೋಕಿಸುತ್ತ ನಡತೆಯ ತಿದ್ದಿಕೊಂಡು, ತಾ
ವೇ ಲೋಕಮಾನ್ಯರಾಗಲಿ, ಎಂದು ನಾಟಕವನಾಡಿ ಕಣ್ಮರೆಯಾದನು. || ೫೯ ||

ತರುಣರೀ ತಿಲಕಚರಿತೆಯನೋದಿ ಪಠಿಸಿದರೆ,
ವರ ದೇಶಭಕ್ತಿ, ಪೌರುಷ, ಶೌರ್ಯಧೈರ್ಯಗಳು,
ಬರುವುವಾ ಮುದುಕರಿಗು ಯೌವ್ವನದ ರಕ್ತವೇ ಹರಿಯುವುದು ನಾಡಿಗಳಲಿ. ||
ಹುರಿಯೇರುತೋದಿದವರೆಲ್ಲರೂ ರಾಷ್ಟ್ರೀಯ
ಪುರುಷರಾಗುವರು. ತರುಣಿಯರೋದಿಪಠಿಸಿದರೆ
ಹೆರುವರೈ ವೀರಪುತ್ರರನೆಂದು ಸೂತಮುನಿ ಅರುಹಿದನು ಶೌನಕರಿಗೆ. || ೬೦ ||

ಕನ್ನಡದಿ ಹುಟ್ಟ, ಕನ್ನಡದ ನೀರನು ಕುಡಿದು,
ಕನ್ನಡದ ಉಪ್ಪನ್ನತಿಂದು ಜೀವನ ಮಾಡಿ,
ಕನ್ನಡದ ರಕ್ತವೈ ನಾಡಿಗಳಲೋಡುತಿರೆ, ನಾಲಿಗೆಗೆ ಬಂದಂದದಿ, ||
ಕನ್ನಡವು ಮುಂದೆ ಮೃತಭಾಷೆಯಹುದೆಂಬ ನರ,
ಸಣ್ಣರಂತೆ ಕೃತಘ್ನನಾನಲ್ಲವದರಿಂದ
ಕನ್ನಡದ ಸೇವೆ, ಎನ್ನುತ ಬರೆದೆನಿದು, ಅಳಿಲು ಸೇತುಕಟ್ಟದತೆರದಲಿ. || ೬೧ ||

ನರರೆಲ್ಲವರು ಸಹೋದರಭಾವದಿಂದಿರಲಿ,
ಅರಸೆ ಪ್ರತ್ಯಕ್ಷದೇವತೆ ಎಂದು ನಂಬಿರಲಿ,
ಬರುವುದೈ ಸತ್ಫಲವು ಸತ್ಕಾರ್ಯಕೆಂಬುದನು ಸೆರಗಿನಲಿ ಗಂಟಕ್ಕಲಿ. ||
ಭರತಖಂಡಕೆ ಸ್ವರಾಜ್ಯವು ಬರಲಿ, ಇದು ಸ್ವರ್ಣ
ಧರೆಯೆಂಬುದಿನ್ನೊಮ್ಮೆ ಅನ್ವರ್ಥವಾಗಲಾ
ದುರುಳರೂ ಸರಳರಾಗಲಿ, ಸತ್ಯಧರ್ಮಪರತತ್ವಕ್ಕೆ ಶುಭಮಂಗಲಂ. || ೬೨ ||

ಏಳನೆ ಸಂಧಿ ಸಂಪೂರ್ಣ.

**ಅಂತು ಸಂಧಿ ಏಳು; ಪದ್ಯ ೩೦೨ ಕ್ಕೆ ಮಂಗಲಂ ||**

ಸಚಿತ್ರ ಮಾಸಪತ್ರಿಕೆ!

ಸಚಿತ್ರ ಮಾಸಪತ್ರಿಕೆ!

# ತಿಲಕ ಸಂದೇಶ

ಇಡೀ ಕನ್ನಡ ನಾಡಿನಲ್ಲಿ ಇದುವರೆಗೆ ಇಂಥಾ ಮಾಸಪತ್ರಿಕೆ ಇರಲಿಲ್ಲವೆಂದು ಅನೇಕ ಪತ್ರಕರ್ತರೂ, ವಿದ್ವಾಂಸರೂ ಅಭಿಪ್ರಾಯಪಟ್ಟಿರುವರು. ಇದರಲ್ಲಿ ಅನೇಕ ರಸವತ್ತಾದ ರಾಜಕೀಯ, ಧಾರ್ಮಿಕ, ವಿದ್ಯಾವಿಷಯಕ, ಉದ್ವೇಗವನ್ನುಂಟುಮಾಡುವ ಐತಿಹಾಸಿಕ, ಮನೋರಂಜಕವೂ ಬೋಧಪ್ರದವೂ ಆದ ಕಾದಂಬರಿಗಳು, ಸ್ಫೂರ್ತಿದಾಯಕವಾದ ಮಹಾತ್ಮಾಗಾಂಧಿ, ಅರವಿಂದಘೋಷ, ಲಾಲಾ ಲಜಪತರಾಯ ಇವರು ಮೊದಲಾದ ದೇಶಭಕ್ತರ ಜೀವನಚರಿತ್ರೆಗಳೂ ಹಿಂದೂದೇಶದ ಸಾಧುಸಂತರ ಜೀವನಚರಿತ್ರೆಗಳೂ ಸಚಿತ್ರವಾಗಿ, ಮತ್ತೆ ಅನೇಕ ವೇದಾಂತ ವಿಚಾರಗಳೂ, ಕಾಶೀ ಯಾತ್ರಾಪ್ರವಾಸಾದಿ ವರ್ಣನೆಗಳೂ ಸಚಿತ್ರವಾಗಿ ಬರುವವು. ಇದಲ್ಲದೇ ಹಿಂದೀ ಭಾಷೆಯನ್ನು ಕಲಿಯುವವರಿಗೆ ಅನುಕೂಲವಾಗುವಂತೆ ಇದರಲ್ಲಿ ಮಹಾತ್ಮಾ ಗಾಂಧಿಯವರೆ ಹಿಂದೀ ಪ್ರಚಾರಿಣೀ ಸಭೆಯವರಿಂದ ಹಿಂದೀ—ಕನ್ನಡ ವಿಭಾಗವೂ ಪ್ರಕಟವಾಗುವುದು. ಇದರಲ್ಲಿರುವ ಭಾಷೆಯೂ ಶೈಲಿಯೂ ಹೆಂಗಸರು ಮಕ್ಕಳಿಗೆ ಕೂಡ ತಿಳಿಯುವಂತೆ ಬಹು ಸುಲಭವಾದ ತಿಳಿಗನ್ನಡದಲ್ಲಿ ಪ್ರಕಟವಾಗುವುದು. ಒಂದು ವರ್ಷ ಚಂದಾದಾರರಾಗಿ ನೋಡಿರಿ! ಮತ್ತೆ ಬಿಡಲಾರಿರಿ! ಇದರ ವರ್ಷಾರಂಭ ಆಗಸ್ಟ (ಶ್ರಾವಣ)ದಿಂದ. ವಾರ್ಷಿಕ ವರ್ಗಣಿ ರೂ. ೩-೦-೦ ವಿ. ಪಿ.ಯಿಂದಾದರೆ ೩-೩-೦ ಮಾತ್ರ.

| | | |
|---|---|---|
| ಕುರ್ತುಕೋಟ ಶ್ರೀ ಮಹಾಭಾಗವತರ ಚರಿತ್ರೆ | (ಸಚಿತ್ರ) | ೦—೪—೦ |
| ಶ್ರೀಮನ್ಮಧ್ವಾಚಾರ್ಯರ ಚರಿತ್ರೆ | " | ೦—೨—೦ |
| ಲೋಕಮಾನ್ಯ ತಿಲಕ ಮಹಾರಾಜರ ಚರಿತ್ರೆ | " | ೦—೬—೦ |
| ಮಹಾತ್ಮಾಗಾಂಧಿಯವರ "ಹಿಂದೀಸ್ವರಾಜ್ಯ" | " | ೦—೮—೦ |

ಮ್ಯಾನೇಜರ್, ತಿಲಕಸಂದೇಶ ಆಫೀಸ್,

ಪೋಸ್ಟ: ಕೊಡಿಯಾಲ್‌ಬೈಲ್, ದ. ಕನ್ನಡ.

